ಅಂಕುರವು ಫಲಿಸಿ ಫಲಪ್ರಾಪ್ತಿಯಾಗಲಿ ೨

ಎಂಬ ಮೂರು ನುಡಿಗಳ ಅಂಕಿತ ಪದವನ್ನು ರಚಿಸಿ ಉಪದೇಶಿಸಿದರು.

ಭಾಗಣ್ಣನವರಿಗೆ ವಿಜಯದಾಸರು ಯಾದಗಿರಿ

ಎಂಬ ನರಸಿಂಹ ಕ್ಷೇತ್ರದಲ್ಲಿ ಅಂಕಿತ ಪ್ರದಾನಮಾಡಿದರೆಂದು ತಂದೆ ಗೋಪಾಲವಿಠಲರು ತಿಳಿಸಿದ್ದಾರೆ.

ಧಾತ್ರಿಯೊಳು ಯಾದವಗಿರಿಯ ಸತ್ಪಾತ್ರ ತಿಮ್ಮಣ್ಣನೆಂಬನಾ
ತೀರ್ಥಯಾತ್ರೆಯ ನೆವದಿಂದಾ ಕ್ಷೇತ್ರದಲಿ ವಾಸಮಾಡ್ದನಾ

. . . . . . . . . . . . . . . . . . . . . . . . . .

ವೆಂಕಟಕೃಷ್ಣೆಂದು ಪದಗಳಿಗಂಕಿತವು ನೀಡುತಲಿರೆ
ವೆಂಕಟೇಶನ ದಾಸವರ್ಯರು ಸೋಂಕಿ ವಿಜಯದಿಂ ಬರುತಿರೆ
ದಾಸವರ್ಯರು ಕಂಡು ಇವರಿಗುಪದೇಶವನು ಕೊಡಲಾಕ್ಷಣಾ
ಏಸು ಜನ್ಮದ ಸುಕೃತವೆನುತಲಿ ಲೇಸು ಲೇಸೆಂದು ಮೆರೆದನಾ ॥

ಭಾಗಣ್ಣನವರು ಅಂಕಿತ ಪಡೆದ ಮೇಲೆ ಗೋಪಾಲದಾಸರೆಂದು ಪ್ರಸಿದ್ಧರಾದರು.

ಶೃತಿ ಶಾಸ್ತ್ರ ಪುರಾಣ ಮಿಕ್ಕಾದ ಗ್ರಂಥಗಳ ಸತತ ಅಭ್ಯಾಸ ಮಾಡಿ' ಎಂದು ವಿಜಯದಾಸರು ಸಂಸ್ಕೃತ ತತ್ವಶಾಸ್ತ್ರ ಗ್ರಂಥಗಳನ್ನು ಚನ್ನಾಗಿ ಅಭ್ಯಾಸ ಮಾಡಿರುವುದಾಗಿ ಹೇಳಿಕೊಂಡಿದ್ದಾರೆ. ಆದರೆ 'Vijayadasa came back to his native home and then went to Kollur to learn the Scriptures of his religion' ಎಂಬ ಅಭಿಪ್ರಾಯವೊಂದಿದೆಯಾದರೂ ಈ ಮಾತಿಗೆ ಯಾವ ಆಧಾರವನ್ನು ಸೂಚಿಸದಿರುವುದರಿಂದ ಇದು ಕೇವಲ ಊಹೆಯ ಮಾತಾಗಿದೆ. ವಿಜಯದಾಸರು ಬಾಲ್ಯದಲ್ಲಿಯೇ ತಮ್ಮ ತಂದೆಯವರಿಂದ ಸಂಸ್ಕೃತ ಅಭ್ಯಾಸವನ್ನು ಮಾಡಿದ್ದು ಹರಿದಾಸರಾದ ಮೇಲೆ ವೇದೋಪನಿಷತ್ತುಗಳ ಅಧ್ಯಯನವನ್ನು ಆಸಕ್ತಿಯಿಂದ ಮಾಡಿರಬಹುದೆನ್ನಿಸುತ್ತದೆ. ಶ್ರೀ ವಿಜಯದಾಸರು ಕೇಲವ ಮಧ್ವ ತತ್ವವನ್ನು ಕನ್ನಡ ಭಾಷೆಯಲ್ಲಿ ತಿಳಿದ ವ್ಯಕ್ತಿಗಳಷ್ಟೇ ಆಗಿರದೆ, ಮಾಧ್ವ ಯತಿ ಪರಂಪರೆಯಲ್ಲಿ ಬಂದ ಅನೇಕ ಪೀಠಾಧಿಪತಿಗಳ ನೇತೃತ್ವದಲ್ಲಿ ಅಧ್ಯಯನ ಮಾಡಿದ ಪಂಡಿತರು ಹೇಗೆ ಸಿದ್ಧಾಂತವನ್ನು ನ್ಯಾಯ, ತರ್ಕ, ಮೀಮಾಂಸಾದಿ

ಗಳೊಡನೆ ಸಂಸ್ಕೃತದಲ್ಲಿಯೇ ವಾಗ್ವಾದಗಳನ್ನು ಪ್ರತಿವಾದಿಗಳೊಡನೆ ನಡೆಸಿ ಜಯದುಂದುಭಿಯನ್ನು ಮೊಳಗಿಸುತ್ತಿದ್ದರೋ ಅಂತೆಯೇ ವಿಜಯದಾಸರು ಸಿದ್ಧಾಂತವನ್ನು ಕರತಲಾಮಲಕವನ್ನಾಗಿಸಿಕೊಂಡು ಪ್ರತಿವಾದಿಗಳನ್ನು ಜಯಿಸುವ ಸಾಮರ್ಥ್ಯವನ್ನು ಪಡೆದಿದ್ದ ಮೇಧಾವಿಗಳಾಗಿದ್ದರು. ರಾಮಶಾಸ್ತ್ರಿ ಎಂಬ ಅದ್ವೈತ ತತ್ವ ಪಂಡಿತರೊಡನೆ ಯುಕ್ತಿ-ಯುಕ್ತವಾಗಿ ವಿಜಯದಾಸರು ವಾದಿಸಿ ಅವರನ್ನು ನಿರುತ್ತರರನ್ನಾಗಿ ಮಾಡಿದಾಗ ಅವರು ವಿಜಯದಾಸರ ಶಿಷ್ಯರಾದರಂತೆ.

ಶ್ರೀ ವಿಜಯದಾಸರಿಗಿದ್ದ ತಪೋಬಲ ಅಗಮ್ಯವಾದುದು. ಶಿಷ್ಯರ ಹಾಗೂ ದುಃಖಿತ ಜನರನ್ನು ಕಂಡಾಗ ಅವರು ಉದಾರಿಗಳಾಗಿ ಅನೇಕ ರೀತಿಯಿಂದ ಅವರಿಗೆ ಉಪಕರಿಸುತ್ತಿದ್ದರು. ಅವರ ಉದಾರವಾದ ಕೊಡುಗೆಯಲ್ಲಿ ಆಯುರ್ದಾನವೂ ಸೇರಿದೆ. ತಮ್ಮ ಆಯಸ್ಸಿನ ಕೆಲವು ವರ್ಷಗಳನ್ನು ಅನೇಕರಿಗೆ ದಾನ ಮಾಡುವ ಶಕ್ತಿ ಅವರಿಗಿದ್ದುದರಿಂದ ಅವರೊಬ್ಬ ಮಹಿಮೋಪೇತ ವ್ಯಕ್ತಿಗಳೆಂದು ಪ್ರಸಿದ್ಧರಾಗಿದ್ದಾರೆ.

ಅನೇಕ ಭಕ್ತರಿಗೆ ಬಂದ ಕಷ್ಟ ಪರಂಪರೆಯನ್ನು ನೋಡಿ ವಿಜಯದಾಸರ ಮನಸ್ಸು ಕರಗಿ ಅವರನ್ನು ಅಂತಹ ಕುತ್ತುಗಳಿಂದ ದೂರಮಾಡುವ ಪ್ರಯತ್ನದಲ್ಲಿ ಸಫಲರಾದ ವಿಜಯದಾಸರು ಎಲ್ಲವೂ ಶ್ರೀ ಹರಿಯ ಅನುಗ್ರಹವೇ ಎಂದು ತಿಳಿದು ಸಂತೋಷದಿಂದಿದ್ದರು. ಸತ್ಪುರುಷರ ಲಕ್ಷಣವೇ ಹೀಗೆ; 'ಪರೋಪಕಾರಾರ್ಥಮಿದಂ ಶರೀರಂ' ಎಂದು ಅವರು ಭಾವನೆ. ಇಂತಹ ಭಕ್ತರ ಹೃದಯದ ಪರಿಪಕ್ವತೆಯನ್ನು ಆ ದೈವವು ಪರೀಕ್ಷಿಸುವ ರೀತಿಯೂ ಒಮ್ಮೊಮ್ಮೆ ಭಯಂಕರವಾಗಿರುವುದುಂಟು. ಆ ಭಕ್ತನ ಭಕ್ತಿಯ ಎತ್ತರವನ್ನು ಪರೀಕ್ಷಿಸಲು ದೇವರು ಭಕ್ತನಿಗೆ ಬಡತನವನ್ನೊಮ್ಮೆ ನೀಡಿ, ಸಿರಿವಂತಿಕೆಯನ್ನು ಮತ್ತೊಮ್ಮೆ ಕರುಣಿಸಿ, ಕೊಟ್ಟದ್ದನ್ನು ಅಪಹರಿಸಿ ಲೋಕದಲ್ಲಿ ಲೋಗರನ್ನಾಗಿ ಮಾಡಿ ಬಂಧು ಬಾಂಧವರನ್ನಗಲಿಸಿ ನಿರಾಶ್ರಿತ ವ್ಯಕ್ತಿಯನ್ನಾಗಿ ಮಾಡಿ, ಆ ಭಕ್ತ ಹೃದಯದ ಪರಿಪಕ್ವತೆಯನ್ನು ಅಳೆಯುತ್ತಾನೆ. ಈ ಯಾವ ಪರೀಕ್ಷೆಗಳಲ್ಲಿಯೂ ಸೋಲದೆ ದೃಢಚಿತ್ತನಾಗಿ ಪರಮಾತ್ಮನಲ್ಲಿ ಭಕ್ತಿಯನ್ನು ಒಂದೇ ರೀತಿಯಾಗಿ ತೋರುವವನೆ ನಿಜವಾದ ಭಕ್ತನಲ್ಲವೆ? ಅಪರಂಜಿ ಬಂಗಾರ ಪುಟಕ್ಕಿಟ್ಟಾಗ ತನ್ನ ಕೊಳೆಯೆಲ್ಲವನ್ನೂ ಕಳೆದು ಕೊಂಡು ಪ್ರಜ್ವಲಿಸುವಂತೆ ಆ ದೇವರ ಪರೀಕ್ಷೆಗಳಿಂದ ಭಕ್ತನು ತನ್ನ ಪಾಪಗಳಿಂದ ವಿಮುಕ್ತನನ್ನಾಗಿ ಪುಣ್ಯಪುಂಜನಾಗಿ ಬೆಳಗುತ್ತಾನೆ. ಇಂತಹ ಪ್ರಸಂಗ ವಿಜಯದಾಸರ ಜೀವನದಲ್ಲಿಯೂ ನಡೆಯಿತು.

ಶೇಷಗಿರಿ ತಂದೆ ನಡೆದ ಹಾದಿಯಲ್ಲಿ ಅವರ ಮನಸ್ಸಿಗನುಗುಣವಾಗಿ ನಡೆಯುತ್ತಾ ಹರಿದಾಸನೆನಿಸಿಕೊಂಡಿದ್ದನು. ಇದರಿಂದ ವಿಜಯದಾಸರಿಗೂ ಅಪಾರವಾದ ಸಂತೋಷವಿತ್ತು. ತಂದೆಯ ಮನಸ್ಸಿನಂತೆ ನಡೆಯುವ ಪುತ್ರನಿಂದ ಯಾವ ತಂದೆಗೆ ತಾನೆ ತೃಪ್ತಿಯಿರುವುದಿಲ್ಲ. ಆದರೆ ಇಂತಹ ಶೇಷಗಿರಿ ಕ್ರಿ.ಶ.೧೭೫೧ರಲ್ಲಿ ಮೃತ್ಯುವಿಗೀಡಾದನು.

'ಹೋದ್ಯಾ ಶೇಗಿರಿದಾಸ ಸುಲಭಹಾದಿಯನು ಮೆಟ್ಟಿ ನಮ್ಮನು ಭವಾಬ್ಧಿಯೊಳಿಟ್ಟು' ಎಂದು ದುಃಖವಾದಾಗ

'ಶೋಕಯಾತಕೆ ಮನವೆ ನಿನಗೆ ಇಂದು
ಈ ಕುಮಾರನು ನಿಜಗತಿಯ ಕೊಡಿಸುವನೇ?'
. . . . . . . . . . . . . . . . . . . .
. . . . . . . . . . . . . . . . . . . .
'ಕಾಲಕ್ಕೆ ತಕ್ಕದ್ದು ಮಾಡಿಸುವ ಹರಿ, ತಾನು
ಮೇಲು ಕೀಳಾಗಗೊಡದಲೆ ನಿತ್ಯ'
'ಚಿಂತೆ ಮಾಡುವುದ್ಯಾಕೆ ಮನವೆ ನೀನು
ಪಿಂತೆ ಎಸಗಿದ ಕರ್ಮ ಎಂದಿಗಾದರೂ ಬಿಡದು'
ನೀನೇನು ಮಾಡಲಾಪಿಯೋ ಲಕುಮೇಶ
ನಾನೀಗ ಪಡೆದದ್ದು ಉಣದಲೆ ಪೋಗುವದೆ ಪ
ಲೋಕದೊಳಗೆ ನಿನ್ನ ಕೊಂಡಾಡಿ ಪ್ರತಿದಿನ
ಏಕ ಭಕುತಿಲಿ ಸರ್ವೋತ್ತಮಾನೆಂದು
ಏಕಾಂತ ಭಜಿಪ ಮನುಜಗಾದರು ಬರೆದ
ವಾಕು ತಪ್ಪುವುದೇನು ಅಜನು ನಿರ್ಣೈಸಿದಾ ॥

ಎಂದು ದುಃಖಿಸಿದರು. ಹೀಗೆ ನಾನಾ ವಿಧವಾಗಿ ಒತ್ತರಿಸಿ ಬರುತ್ತಿದ್ದ ದುಃಖವನ್ನು ತತ್ವಶಾಸ್ತ್ರಗಳ ಬಲದಿಂದ ತಾವು ಸಮಾಧಾನ ಮಾಡಿಕೊಂಡರಲ್ಲದೆ ತಮ್ಮ ಪತ್ನಿಯವರಿಗೂ ಅಂತಹ ಸಮಾಧಾನದ ಮಾತುಗಳನ್ನು ಹೇಳಿದರು. ಹಿಂದೆ ಯಾವುದೋ ಜನ್ಮದಲ್ಲಿ ಕಾಡಿನಲ್ಲಿದ್ದ ಬಾಲ ಮೃಗವೊಂದನ್ನು ತಾವು ಕೊಂದು

ಯಮಪುರಿಗೆ ಕಳುಹಿದುದರಿಂದ ಶೇಷಗಿರಿಯನ್ನು ಕಳೆದುಕೊಳ್ಳಬೇಕಾಯಿತೆಂದು ವಿಜಯದಾಸರು ಒಂದು ಕೃತಿಯಲ್ಲಿ ಹೇಳಿದ್ದಾರೆ.

ಚಿಂತೆ ಯಾತಕೆ ನಿನಗೆ ಎಲೆ ಪ್ರೀಯಳೆ
ಸಂತತಾ ತಿಳುಪುವೆನು ಭಕುತಿಯಿಂದ ಕೇಳು ಪ

. . . . . . . . . . . . . . . . . . . . .

. . . . . . . . . . . . . . . . . . . . .

ಸಂತಾನವಿಲ್ಲೆಂದು ಈರ್ವರು ಚಿಂತಿಪುದ್ಯಾಕೆ
ಪಿಂತೆ ಕಾಂತಾರದಲಿ ಬಾಲ ಮೃಗನಾ
ಅಂತಕನ ಪುರಿಗೆ ಅಟ್ಟಿದ ದೋಷದಿಂದ ನಮ
ಗಿಂತು ತೋರಿತು ಗುಟ್ಟು ಪೇಳಬಾರದು ರಮಣಿ ॥
ಈ ಜನ್ಮ ಬಂದದಕೆ ಇನ್ನಾದರೆಚ್ಚತ್ತು
ಮಾಜಿಕೊಂಡಿದ್ದ ಜನರಂತೆ ನಡದು
ಮೂಜಗತ್ಪತಿ ಸಿರಿ ವಿಜಯವಿಠಲನ ಸ
ರೋಜ ಚರಣವನು ಪೂಜಿಸುವೆನೊ ರಮಣಿ ॥

ವಿಜಯದಾಸರು ಲೌಕಿಕ ಸಂಪಾದನೆಗಾಗಿ ಶ್ರೀ ಹರಿಯನ್ನು ಮೊರೆಹೊಕ್ಕವರಲ್ಲ. ಜೀವನದ ಕ್ಷಣಿಕತೆಯನ್ನೂ ದುಃಖ ಮಿಶ್ರಿತವಾದ ಸುಖಸ್ವರೂಪವನ್ನೂ ಅರಿತುಕೊಂಡ ಅವರು ಭವಬಂಧನದ ಸರಪಳಿಯನ್ನು ಕಳಚಿಕೊಳ್ಳಲೆಂದು ಉನ್ನತ ಭಕ್ತಿ ಭಿಕ್ಷುಗಳಾದ ಹರಿದಾಸರವರು. ಅಂತಹವರನ್ನು ಲಕ್ಷ್ಮೀ ವೆಂಕಟೇಶನು ಮತ್ತೊಮ್ಮೆ ಬೇರೊಂದು ರೀತಿ ಪರೀಕ್ಷೆಗೀಡು ಮಾಡಿದ ಪ್ರಸಂಗ ಬಹು ಸ್ವಾರಸ್ಯವಾಗಿದೆ.

ಚೀಕಲಪರಿವಿಯಲ್ಲಿದ್ದಾಗ ಒಂದು ದಿನ ವಿಜಯದಾಸರು ಪ್ರಾತಃ ಕಾಲದಲ್ಲಿ ಮನೆಬಿಟ್ಟು ಹೊರಗೆ ಹೋದವರು ಭೋಜನ ಸಮಯವಾದರೂ ಮನೆಗೆ ಹಿಂದಿರುಗಲಿಲ್ಲ. ಆಗ ಅವರ ಮನೆಗೆ ಮುತ್ತೈದೆಯೊಬ್ಬಳು ಬೆಳ್ಳಿಯ ತಟ್ಟೆಯಲ್ಲಿ ಸೊಗಸಾದ ಷಡ್ರಸೋಪೇತವಾದ ನಾನಾ ವಿಧ ಭೋಜನ ಪದಾರ್ಥಗಳನ್ನು ಎಲೆ ಮುಚ್ಚಿ ತಂದು, ಬೆಳ್ಳಿಯ ತಂಬಿಗೆಯಲ್ಲಿ ಕೇಸರಿ ಬೆರಸಿದ ನೀರನ್ನಿಟ್ಟು, ವಿಜಯದಾಸರು ತಮ್ಮ ಮನೆಗೆ ಭೋಜನಕ್ಕೆ ಒಪ್ಪಿಕೊಂಡವರು ಎಷ್ಟು ಹೊತ್ತಾದರೂ

ಬಾರದಿದ್ದುದರಿಂದ ಮನೆಯವರು ಇವುಗಳನ್ನು ಕಳುಹಿಸಿದ್ದಾರೆಂದು ತಿಳಿಸಿ, ಕೊಟ್ಟು ಅದೃಶ್ಯಳಾದಳಂತೆ. ಅನಂತರ ಮನೆಗೆ ವಿಜಯದಾಸರು ದಯಮಾಡಿಸಿದರು. ಮನೆಯೆಲ್ಲಾ ಪಚ್ಚಕರ್ಪೂರ ಕೇಸರಿ ಮತ್ತು ಹಸನಾದ ಘೃತದಿಂದ ಘಮಘಮಿಸುತ್ತಿತ್ತು. ಆಶ್ಚರ್ಯದಿಂದ ಮನೆಯಲ್ಲಿ ಕೇಳಿದಾಗ 'ಭೋಜನಕ್ಕೆ ಒಪ್ಪಿ ಮಾತು ಕೊಟ್ಟು ಅನ್ಯರಿಗೆ ತೊಂದರೆ ಕೊಡುವುದು ಸರಿಯೆ?' ಎಂಬ ಪ್ರಶ್ನೆಯೇ ಬಂದಿತು. ಆದರೆ ಆ ದಿನ ವಿಜಯದಾಸರನ್ನು ಯಾರೂ ಭೋಜನಕ್ಕೆ ಆಹ್ವಾನಿಸಿರಲಿಲ್ಲವಂತೆ. ಶ್ರೀ ಹರಿ ಅನುಗ್ರಹಿಸಿದ ಭೋಜ್ಯ ವಸ್ತುಗಳನ್ನು ಭುಂಜಿಸಿ ಆನಂದಿಸಿದ ಮೇಲೆ ವಿಜಯದಾಸರಿಗೆ ತಮ್ಮ ಮನೆಗೆ ಸಾಕ್ಷಾತ್ ಸಂಪದಭಿಮಾನಿ, ಕ್ಷೀರಸಾಗರ ಕನ್ನಿಕೆಯಾದ ಲಕ್ಷ್ಮೀದೇವಿಯೇ ಬಂದಿರುವುದಾಗಿ ಭಾಸವಾಯಿತು. ಇದರಿಂದ ಉಂಟಾದ ಸಂತೋಷದೊಡನೆ ಆ ಭಕ್ತ ಹೃದಯಕ್ಕೆ ತಾಪವೂ ಆಯಿತು. ಆಗ ಭಾವಪರವಶರಾಗಿ

ನೀನೊಲಿದುದಕ್ಕಿಹ ಸೌಖ್ಯವೆ ಇನ್ನು ।
ನಾನೊಲ್ಲೆ ನಾನೊಲ್ಲೆ ಸರ್ವೇಶ
ಮಾನಸದಲಿ ನಿತ್ಯ ನೆರನಂಬಿದಂಥ ಮಾನವನ ಕೂಡ
ಮೌನವಾಗಿಪ್ಪರೇ? ಪ
ಷಡುರಸ ನಾನಾ ಸುಭೋಜನ
ಬಿಡಿಸಯ್ಯಾ ದಾನವ ಭಂಜನಾ
ಒಡನೊಡನೆ ಮೊರೆಯಿಡುವೆನೊ ಕರುಣಿಸೊ
ಅಡಿಗಡಿಗಜ್ಞಾನ ಕೊಡದಂತೆ ಪ್ರತಿದಿನ
ಒಡಲಿಗೋಸುಗ ಪೊಡಮಟ್ಟು ನಿ
ನ್ನಡಿಗಳಿಗೆ ನಮಿಸದೆ ಕೇಳೆ
ನ್ನೊಡೆಯಾ ಧ್ಯಾನವ ಪಾಲಿಸಿ ಭವ
ದಡಿಯ ತಡೆಯಿಂದೆತ್ತಿ ನೋಳ್ಪುದು ೧
ಜನಜನರಿಂದ ಮನ್ನಣೆ ದೇವ
ಎನಗೆ ಹತ್ತದು ಕಾಣೊ ನಿನ್ನಾಣೆ
ಮನೋ ವಾಚ ಕಾಯದಲ್ಲಿನಿತು ಸಿದ್ಧವಿದೆ

ಅನುವಿಲ್ಲ ಯೋಚನೆ ಯಾತಕೆ ದೇವಾ
ಜನುಮದೊಳು ಸಾಧನವಿದಾಯಿತು
ಧನ ಕನಕ ವಾಹನಗಳಿಂದಲಿ
ಘನಗತಿಗೆ ಒಂದಿನ ಒಂದಾದರೂ
ಗುಣದಿ ನಿನ್ನಾರ್ಚನೆ ಮಾಡಲಿಲ್ಲ ೨
ಕಂಡ ಕಂಡಲ್ಲೆನ್ನ ತಿರುಗಿನ
ಥಂಡ ಥಂಡದಿಂದ ಮರುಗಿಸಿ
ಮಂಡಲದೊಳು ನೀ ಚಂಡ ಕರ್ಮದೊಳಿಟ್ಟು
ಉಂಡುಂಡದಕೆಲ್ಲ ದಂಡಿಸುವರೇನೊ
ತೋಂಡ ನಾನೈ ತವಕದಿಂದಲಿ
ಖಂಡ ಮತಿಯನು ಕೊಡದೆ ಒಲಿದು
ಹಿಂಡು ಮುಕ್ತರ ಸಂಗವೀವುದು
ಗಂಡುಗಲಿ ಸಿರಿ ವಿಜಯವಿಠಲ ೩

'ಷಡುರಸ ನಾನಾ ಭೋಜನದಲ್ಲಿನ ಆಸಕ್ತಿ' ನಿರಸನಕ್ಕಾಗಿ ಶ್ರೀ ಹರಿಯಲ್ಲಿ ನಿವೇದಿಸಿಕೊಂಡು 'ನೀನೊಲಿದುದಕ್ಕಿಹ ಸೌಖ್ಯವೆ ನಾನೊಲ್ಲೆ ನಾನೊಲ್ಲೆ ಸರ್ವೇಶ' ಎಂದು ಹಾಡಿರುವುದು ವಿಜಯದಾಸರ ಜೀವನದ ಗುರಿ ಏನೆಂಬುದನ್ನು ಸ್ಪಷ್ಟಪಡಿಸುತ್ತದೆ.

ವಿಜಯದಾಸರು ಹೀಗೆ ಲೋಕದ ಜೀವನಕ್ಕೆ ಅಂಟಿಯೂ ಅಂಟದಂತಿದ್ದರು. ಸಾಧನೆಯ ದಿವ್ಯಮಾರ್ಗದಲ್ಲಿ ಸಾಗುತ್ತಾ ಕಾಲಕಾಲಕ್ಕೆ ಸ್ಫೂರ್ತಿ ಕುಡಿಯೊಡೆದಂತೆ ಅನೇಕ ಕೃತಿಗಳನ್ನು ರಚಿಸಿ, ಕನ್ನಡಿಗರಿಗುಪಕರಿಸಿದರು. ಇವರು ರಚಿಸಿದ ಕೀರ್ತನೆಗಳು ಐನೂರಕ್ಕೂ ಹೆಚ್ಚಾಗಿ ದೊರೆತಿವೆ. ಹರಿದಾಸ ಚತುಷ್ಟಯರಲ್ಲಿ ಎರಡನೆಯವರಾದ ಶ್ರೀ ವಿಜಯದಾಸರು ಉಳಿದ ಇಬ್ಬರು ಮಹನೀಯರಾದ ಶ್ರೀ ಗೋಪಾಲದಾಸರು ಹಾಗೂ ಶ್ರೀ ಜಗನ್ನಾಥದಾಸರಿಗೆ ಮಾರ್ಗದರ್ಶಕರಾದವರು. ಶ್ರೀ ಜಗನ್ನಾಥದಾಸರಿಗೆ ಗೋಪಾಲದಾಸರಿಂದ ನಲವತ್ತು ವರ್ಷಗಳ ಆಯುರ್ದಾನವನ್ನು ಮಾಡಿಸಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಭೂತಪೂರ್ವವಾದ ಗ್ರಂಥವೆಂಬ ಪ್ರಶಸ್ತಿಗೆ ಪಾತ್ರವಾದ

'ಶ್ರೀ ಹರಿಕಥಾಮೃತಸಾರ' ಎಂಬ ತತ್ವಶಾಸ್ತ್ರ ಗರ್ಭಿತವಾದ ಕಾವ್ಯವನ್ನು ರಚಿಸಲು ವಿಜಯದಾಸರು ನೆರವಾದರು. ಶ್ರೀ ಗೋಪಾಲದಾಸರಿಂದ ಶ್ರೀನಿವಾಸಾಚಾರ್ಯರಿಗೆ ಅಂಕಿತ ಕೊಡಿಸಿ, ವಿಜಯದಾಸರು ಆಶೀರ್ವದಿಸಿದ ಘಟನೆಯಿಂದ ದಾಸರ ವ್ಯಕ್ತಿತ್ವ, ವಿಶಾಲ ಹೃದಯ ತಿಳಿದು ಬರುತ್ತದೆ.

ಕರ್ನಾಟಕದ ರಾಯಚೂರು ಜಿಲ್ಲೆಯ ಮಾನವಿ ಕ್ಷೇತ್ರದಲ್ಲಿ ಶ್ರೀ ನರಸಪ್ಪ ಲಕ್ಷ್ಮೀಬಾಯಿ ದಂಪತಿಗಳಿಗೆ ಶ್ರೀನಿವಾಸ ಎಂಬ ಪುತ್ರನಿದ್ದನು. ಚಿಕ್ಕಂದಿನಲ್ಲಿಯೇ ಮಂತ್ರಾಲಯದ ಶ್ರೀ ವರದೇಂದ್ರತೀರ್ಥ ಶ್ರೀಪಾದಂಗಳವರಲ್ಲಿ ವಿದ್ಯಾಭ್ಯಾಸ ಮಾಡಿದ ಶ್ರೀನಿವಾಸ ವೇದೋಪನಿಷತ್ತುಗಳ ರಹಸ್ಯವನ್ನು ಸತತ ಅಭ್ಯಾಸದಿಂದಲೂ ಪ್ರತಿಭೆಯಿಂದಲೂ ಅರಿತು ಗುರುಗಳ ಆಶೀರ್ವಾದಕ್ಕೆ ಪಾತ್ರನಾದನು. ವಿದ್ಯಾಭ್ಯಾಸವಾದ ಮೇಲೆ ಶ್ರೀಪಾದಂಗಳವರು ಸಂತೋಷದಿಂದ 'ಆಚಾರ್ಯ' ಎಂಬ ಬಿರುದನ್ನಿತ್ತು ಆಶೀರ್ವದಿಸಿದರು. ಶ್ರೀನಿವಾಸಾಚಾರ್ಯರಾಗಿ ಮಾನವಿಗೆ ಬಂದ ಮೇಲೆ ಅನೇಕ ಶಿಷ್ಯರಿಗೆ ಪಾಠ ಹೇಳುತ್ತಾ ವಿದ್ವಾಂಸರೆಂಬ ಘನತೆಯಿಂದ ಸಂತೃಪ್ತ ಜೀವನವನ್ನು ನಡೆಸುತ್ತಿದ್ದರು. ಶ್ರೀನಿವಾಸಾಚಾರ್ಯರ ಸಂಸ್ಕೃತ ಪಾಂಡಿತ್ಯ ದಿನ ಕಳೆದಂತೆ ವರ್ಧಿಸುವುದರ ಜೊತೆಗೆ ಕನ್ನಡದಲ್ಲಿ ತತ್ವಶಾಸ್ತ್ರವನ್ನೂ ತಿಳಿಸುವ ಹರಿದಾಸರ ಗುಂಪಿನ ಮೇಲೆ ತಾತ್ಸಾರವೂ ಉಂಟಾಯಿತು. ಇವರ ತಾಯಿಯ ಸೋದರ ಸಂಬಂಧಿಯೇ ಆದ ಶ್ರೀ ವಿಜಯದಾಸರು ಮಾನವಿಗೆ ಬಂದಾಗ ಅಹಂಕಾರದಿಂದ ಬಂಧುವೊಬ್ಬರನ್ನು ಮಾತನಾಡಿಸುವುದಕ್ಕೂ ಆ ಸಂಸ್ಕೃತದ ವ್ಯಾಮೋಹ ಅಡ್ಡವಾಗಿ ನಿಂತಿತು. ಶ್ರೀನಿವಾಸಚಾರ್ಯರು ಮನಸ್ಸಿನಲ್ಲಿ,

'ದಾಸವೇಷವ ಧರಿಸಿ ಕೂಸಿ ಮಗ ನೀನು ಬಹು
ಮೋಸಪಡಿಸಿದೆ ಜನರ ಭಾಸ್ವದಪರೋಕ್ಷಿಯೆಂ
ದೇಸು ಬಗೆಯಾಯ್ತು ಕಲಿದೋಷ ಹಾ। ಹಾ।'

ಎಂದು ಭಾವಿಸಿ, 'ಭೂಸುರನ ಕ್ಲೇಶಪಡಿಸಿ'ದರಂತೆ 'ಇಂತು ಹರಿಶರಣ ಧೀಮಂತರನು ಬೈದ' ಪರಿಣಾಮದಿಂದಲೋ ಏನೋ ಉದರಬೇನೆ ಆಚಾರ್ಯರಿಗೆ ಪ್ರಾಪ್ತವಾಗಿ ಹಾಸಿಗೆ ಹಿಡಿದು ಮಲಗಬೇಕಾಯಿತು. 'ಕಂಸಮರ್ದನ ದಾಸರಿಗೆ ಸಂಶಯದಿ ಎರಗದಲೆ ವಿದ್ವಾಂಸನೆಂದಹಂಕರಿಸೆ ಭವಗುಣದಿ ಬಂಧಿಸುವ' ಎಂದು ಹರಿಕಥಾಮೃತಸಾರದಲ್ಲಿ ತಮ್ಮ ಜೀವನದ ಘಟನೆಯನ್ನೇ ಆಚಾರ್ಯರು

ಧ್ವನಿಸಿರಬೇಕೆನಿಸುತ್ತದೆ. ಆ ಉದರಬೇನೆ ಯಾವ ಲೌಕಿಕ ವೈದ್ಯರಿಂದಲೂ ಹತೋಟಿಗೆ ಸಿಗದಿರಲು ಭವರೋಗ ವೈದ್ಯನನ್ನೆ ಶರಣುಹೋದಾಗ ಶ್ರೀ ವಿಜಯದಾಸರನ್ನೇ ಶರಣು ಹೋಗಬೇಕೆಂದು ಸೂಚನೆಯಾಯಿತು. ವಿಧಿಯಿಲ್ಲದೆ ಚೀಕಲಪರಿವಿಯಲ್ಲಿದ್ದ ವಿಜಯದಾಸರಲ್ಲಿಗೆ ಬಂದು ನಮಸ್ಕರಿಸಿ ಕ್ಷಮೆಯನ್ನು ಕೇಳಿದಾಗ ಬಂಧುವನ್ನು ಪ್ರೀತಿಯಿಂದ ಮಾತನಾಡಿಸಿ ಅಭಯವಿತ್ತು, ಉತ್ತನೂರಿನ ಶ್ರೀ ಗೋಪಾಲದಾಸರಲ್ಲಿಗೆ ಹೋದರೆ ಗುಣವಾಗುವುದೆಂದು ವಿಜಯದಾಸರು ಆಶೀರ್ವದಿಸಿದರು. ಉತ್ತನೂರಿಗೆ ಹೋಗಿ ಗೋಪಾಲದಾಸರನ್ನು ಪ್ರಾರ್ಥಿಸಿದ ಮೇಲೆ, ವಿಜಯದಾಸರ ಅಪ್ಪಣೆಯಂತೆ,

ಎನ್ನ ಬಿನ್ನಪ ಕೇಳೊ ಧನ್ವಂತ್ರಿ ದಯಮಾಡೊ
ಸಣ್ಣವನು ಇವ ಕೇವಲ ಪ
ಬನ್ನ ಬಡಿಸುವ ರೋಗವನ್ನು ಮೋಚನ ಮಾಡಿ
ಚನ್ನಾಗಿ ಪಾಲಿಸುವುದು ಕರುಣಿ ಅ.ಪ.

ಎಂದು ಗೋಪಾಲದಾಸರು ಕೃತಿಯನ್ನು ರಚಿಸಿ, ಶ್ರೀ ಹರಿಯನ್ನು ಪ್ರಾರ್ಥಿಸಿ, ಧನ್ವಂತ್ರೀ ಮಂತ್ರಪೂರಿತವಾದ ಭಕ್ರಿಯನ್ನು ಶ್ರೀನಿವಾಸಾಚಾರ್ಯರಿಗೆ ನೀಡಿ ಉದರ ಬೇನೆಯನ್ನು ಹೋಗಲಾಡಿಸಿದರು. ಪಂಡರಪುರದ ವಿಠಲನ ದರ್ಶನಕ್ಕೆ ಶ್ರೀನಿವಾಸಾಚಾರ್ಯರು ತೆರಳಿದಾಗ ಅಲ್ಲಿಯ ಚಂದ್ರಭಾಗ ನದಿಯಲ್ಲಿ ಮಿಂದಾಗ ತಲೆಯ ಮೇಲೆ 'ಜಗನ್ನಾಥವಿಠಲ' ಎಂಬ ಶಿಲಾಫಲಕ ದೊರೆತು ಶ್ರೀನಿವಾಸಾಚಾರ್ಯರು ಅಂದಿನಿಂದ **'ಶ್ರೀ ಜಗನ್ನಾಥದಾಸರು'** ಎಂದೇ ಪ್ರಸಿದ್ಧಿಯಾದರು. ಗೋಪಾಲದಾಸರನ್ನು ಗುರುಗಳೆಂದು ತೋರಿಸಿದ ಶ್ರೀ ವಿಜಯದಾಸರನ್ನು ಇನ್ನೊಂದು ಕೃತಿಯಲ್ಲಿ ಹೀಗೆ ನೆನೆದಿದ್ದಾರೆ:

'. . . . . . ಘೋರ ವ್ಯಾಧಿಯ ನೋಡಿ ವಿಜ
ಯರಾಯ ಭೂರಿ ಕರುಣವ ಮಾಡಿ
ತೋರಿದವರಿವರೆ ಉದ್ಧಾರಕರೆಂದಂದಿ
ನಾರಭ್ಯ ತವಪಾದ ಸೇರಿದ ಸಲಹೆಂದು . . . . '

ವಿಜಯದಾಸರು ತಮ್ಮ ತಪೋಬಲವನ್ನು ಪರೋಪಕಾರಕ್ಕಾಗಿ ಉಪಯೋಗಿಸಿಕೊಂಡರೇ ವಿನಾ ಇತರರನ್ನು ಹಾಳು ಮಾಡಲು ಎಂದಿಗೂ ಮುಣ್ಕಾದ

ಪ್ರಯೋಜನವನ್ನು ಪಡೆದುಕೊಳ್ಳಲಿಲ್ಲ. ಉಳಿದವರ ಸಂತೋಷವೇ ಅವರ ಜೀವನದ ಗುರಿಯಾಗಿತ್ತು. ತಮ್ಮ ಶಿಷ್ಯರ ಮೇಲೆ ಅವರಿಗೆ ಅಪಾರವಾದ ವಾತ್ಸಲ್ಯವಿತ್ತು. ಒಂದು ಸಲ ವಿಜಯದಾಸರ ಶಿಷ್ಯರಲ್ಲಿ ಕೆಲವರು ತೀರ್ಥಯಾತ್ರೆಗೆಂದು ಗುರುಗಳ ಅನುಜ್ಞೆಯನ್ನು ಪಡೆದು ಪಂಡರಾಪುರಕ್ಕೆ ಹೋಗಿದ್ದರು. ದಾಸರ ಜೊತೆಯಲ್ಲಿಯೇ ಉಳಿಯಬೇಕಾದ ಕೆಲವು ಶಿಷ್ಯರು ತಮಗೆ ವಿಠಲನ ದರ್ಶನ ಲಾಭವಿಲ್ಲೆಂದು ಮನಸ್ಸಿನಲ್ಲಿ ಆತಂಕಪಟ್ಟುಕೊಳ್ಳುತ್ತಿದ್ದರು. ಆ ದಿನ ದಾಸರು ಚೀಕನ ಬರಿವಿಯ ಅಶ್ವತ್ಥ ನರಸಿಂಹನ ಬಳಿಯಿದ್ದವರು, ತಮ್ಮ ಶಿಷ್ಯರ ಮನಸ್ಸಿನ ಚಿಂತೆಯನ್ನು ತಿಳಿದು ದೇವರ ಪೂಜೆ ಮಾಡುವ ಸಮಯದಲ್ಲಿ ತಮ್ಮ ಶಿಷ್ಯರಿಗೆ 'ಮುಸುಕು ಹಾಕಿಕೊಳ್ಳಿ' ಎಂದು ಹೇಳಿ ಕೆಲವು ನಿಮಿಷಗಳಾದ ಮೇಲೆ 'ಮುಸುಕು ತೆಗೆದು ದೇವರ ದರ್ಶನ ಮಾಡಿರಿ' ಎಂದು ಹೇಳಿದಾಗ ನರಸಿಂಹನ ಬದಲಾಗಿ ಶಿಷ್ಯರು ಪಾಂಡುರಂಗನನ್ನೇ ಕಂಡರಂತೆ. ಈ ಸಂಗತಿಯನ್ನು ಶ್ರೀ ಗೋಪಾಲದಾಸರು, ಅಂಗ ಮುಸುಕು ತೆಗೆಯಲು ಕ್ಷೇತ್ರದಿ ಪಾಂಡುರಂಗನೋ ವಿಜಯರಾಯ' ಎಂದು 'ಸ್ಮರಿಸುವೆ ನಾ ನಿಮ್ಮ ಚರಣಕಮಲ' ಎಂಬ ಕೃತಿಯಲ್ಲಿ ತಿಳಿಸಿರುವರು.

### ವಿಜಯವಿಠಲನ ಆಗಮನ

ಮಾಳಿಗೆ ಶ್ರೀನಿವಾಸಚಾರ್ಯರೆಂಬ ಜ್ಞಾನಿಗಳು, ಸದಾಚಾರ ಸಂಪನ್ನರೂ ಆದ ವಿದ್ವಾಂಸರು 'ವಿಜಯವಿಠಲ' ಪ್ರತಿಮೆಯನ್ನು ಪ್ರತಿನಿತ್ಯವೂ ಪೂಜಿಸುತ್ತಾ ಸಾಧನ ನಿರತರಾಗಿದ್ದರು. ಶ್ರೀನಿವಾಸಚಾರ್ಯರಿಗೆ ವೃದ್ಧಾಪ್ಯ ಸಮೀಪಿಸಿದ ಮೇಲೆ ಶ್ರೀ ಹರಿಯ ಸೂಚನೆಯಂತೆ ವಿಜಯವಿಠಲನ ವಿಗ್ರಹವನ್ನು ವಿಜಯದಾಸರಿಗೆ ಒಪ್ಪಿಸಿದರೆಂದು ಶ್ರೀ ಮೋಹನದಾಸರು ಹೇಳಿದ್ದಾರೆ.

'ವಿಜಯರಾಯರ ಪಾದ ನಿಜವಾಗಿ ನಂಬಲು
ಅಜನ ಪಿತ ತಾನೆ ಒಲಿವಾ
. . . . . . . . . . . . . . . . . . .
. . . . . . . . . . . . . . . . . . .
ಸಿರಿ ವಿಜಯವಿಠಲ ಶ್ರೀನಿವಾಸಾ
ಚಾರ್ಯರು ಹರಿಯಾಜ್ಞೆಯಿಂದ ಕೊಟ್ಟರು'

ವಿಜಯವಿಠಲನ ಪ್ರತಿಮೆ ಶ್ರೀ ಹರಿಯಿಂದಲೇ ಶ್ರೀನಿವಾಸಾಚಾರ್ಯರ ಮೂಲಕ ಮನೆಗೆ ಬಂದಾಗ ವಿಜಯದಾಸರಿಗಾದ ಆನಂದಕ್ಕೆ ಪಾರವಿಲ್ಲದಂ- ತಾಯಿತು. ತಾವು ತೋರಿದ ಅಲ್ಪ ಭಕ್ತಿಗೆ ವಿಜಯವಿಠಲ ಒಲಿದುದರ ಸಂತೋಷದಲ್ಲಿ,

ಇಂದು ಎನ್ನ ಮನೆಗೆ ಬಂದ ಕಾರಣವೇನು
ಇಂದಿರಾ ರಮಣ ಗೋವಿಂದ ಕೃಷ್ಣ
. . . . . . . . . . . . . . . . . .
. . . . . . . . . . . . . . . . . .
ಜ್ಞಾನ ಪೂರ್ವಕವಾಗಿ ಜ್ಞಾನದಿಂದಧಿಕರಾದ
ನೀನೆ ನೀನೆ ಎಂಬೊ ಶ್ರೀನಿವಾಸಚಾರ್ಯರ
ಮಾನಸದಲ್ಲಿ ಪೊಳೆದ ಮಾನಿಸರೂಪನೆ'

ಎಂದು ಒಂದು ಸುಳಾದಿಯನ್ನು ಆಗ ರಚಿಸಿದರು. ಅಭಿಷೇಕ, ಅರ್ಚನೆ, ಸ್ತೋತ್ರ, ನೈವೇದ್ಯ-ಯಾವುದನ್ನೂ ಸಮರ್ಪಕವಾಗಿ ಮಾಡುವ ಶಕ್ತಿಯಿಲ್ಲದ ಪಾಮರನಲ್ಲಿ ವಿಜಯವಿಠಲ ದಯಮಾಡಿಸಿರುವನೆಂದ ಮೇಲೆ ಅವನ ಕಾರುಣ್ಯ ಎಷ್ಟೆಂದು ವಿಜಯದಾಸರೇ ಆಶ್ಚರ್ಯಪಟ್ಟಿದ್ದಾರೆ.

ಅಭಿಷೇಕವೆಂಬಂಥ ಉತ್ತಮ ಮನ್ನಣೆಯಿಲ್ಲ
ಆಭರಣ ವಸನ ಗಂಧಾಕ್ಷತೆ ಮೊದಲಿಲ್ಲ
ಶೋಭನವಾದ ಕುಸುಮ ತುಳಸಿಯಿಲ್ಲ
ಸೌಭಾಗ್ಯವಾದ ಧೂಪಾದಿ ಓದನವಿಲ್ಲ
ಆ ಭಕ್ಷ್ಯ ಪಾಯಸ ಪರಿ ಪರಿ ಪಡಿಗಳಿಲ್ಲ
ಅಭಿವಂದನೆ ಸರ್ವ ಪೂಜಾ ಲಕ್ಷಣವಿಲ್ಲ
ಕುಭವದಲ್ಲಿನ ಲೋಭಿಯ ಸೇರಲು
ಲಾಭವೇನು ಪೇಳೋ? . . . . . . . .
. . . . . . . . . . . . . . . . . .
. . . . . . . . . . . . . . . . . .

ನೆಚ್ಚಿ ಮೆಚ್ಚಿಸಲಾರೆ ಅರ್ಚಿಸಿ ಒಲಿಸಲಾರೆ

ನಿಚ್ಚ ನೀನೇ ಪೊರೆಯೋ ವಿಜಯವಿಠಲ ಹರಿಯೇ

ವಿಜಯದಾಸರ ನಿರಹಂಕಾರ ಹಾಗೂ ಭಯಭರಿತವಾದ ಭಕ್ತಿಗೆ ಮೇಲಿನ ಕೃತಿ ಸಾಕ್ಷಿಯಾಗಿದೆ. ವಿಜಯವಿಠಲನ ವಿಗ್ರಹವನ್ನು ಒಂದು ದಿನ ತಮ್ಮ ಶಿಷ್ಯರಾದ ಗೋಪಾಲದಾಸರಿಗೆ ಪೂಜೆಗೆಂದು ಅನುಗ್ರಹಿಸಿದಾಗ ಗೋಪಾಲದಾಸರು,

ಬಂದ್ಯಾ ವಿಠಲ ಇಂದು ಬಡತನದಲ್ಲಿ

ವೃಂದಾವನದಲಿ ಗೋವೃಂದಗಳ ಕಾಯ್ದವನೆ

. . . . . . . . . . . . . . . . . .

. . . . . . . . . . . . . . . . . . .

ಮಾಳಗಿ ಶ್ರೀನಿವಾಸರ್‍ಯರ ಮನೆಯಿಂದ

ಶೀಲಗುರು ವಿಜಯದಾಸರಿಗೆ ಒಲಿದು

ಮೇಲಾಗಿ ಬಹು ಪರಿಯಿಂದ ಪೂಜೆಯಗೊಂಡು

ಕೀಳು ಮನುಜನ ಎನ್ನ ಪಾಲಿಸಬೇಕೆಂದು

ಎಂದು ವಿಜಯವಿಠಲ ವಿಗ್ರಹದ ಇತಿಹಾಸವನ್ನು ಸ್ಪಷ್ಟಪಡಿಸಿದ್ದಾರೆ. ಈ ವಿಗ್ರಹ ಗದ್ವಾಲ್‌ನಲ್ಲಿರುವ 'ತಂದೆ ಗೋಪಾಲವಿಠಲ'ರ ವಂಶಜರಾದ ಶ್ರೀ ವೆಂಕೋಬದಾಸರ ಮನೆಯಲ್ಲಿ ಇಂದಿಗೂ ಕಾಣಬಹುದು.

ಶ್ರೀ ಜಗನ್ನಾಥದಾಸರಿಗೆ ಅಹಂಕಾರ ನಿರಸನ ಮಾಡಿ, ಹರಿದಾಸ ಸಾಹಿತ್ಯದಲ್ಲಿಯೂ – ಹರಿದಾಸರಲ್ಲಿಯೂ ಗೌರವ ತೋರುವಂತೆ ಮಾಡಿದ ರೀತಿಯಲ್ಲಿ ನ್ಯಾಯಸಂಧೆಯ ಪಂಡಿತರಾಗಿದ್ದ ಕಲ್ಲೂರು ಸುಬ್ಬಣ್ಣಾಚಾರ್ಯರ ಅಹಂಕಾರವನ್ನು ಮುರಿದು ಅವರ ಹೃದಯವನ್ನು ವಿಜಯದಾಸರು ನಿರ್ಮಲ ಮಾಡಿದರು.

ಒಂದು ದಿನ ಶ್ರೀ ಜಯತೀರ್ಥ ವಿರಚಿತ 'ಶ್ರೀಮನ್ನ್ಯಾಯಸುಧಾ' ಗ್ರಂಥದ ಮಂಗಳ ಮಹೋತ್ಸವ ವಿಜೃಂಭಣೆಯಿಂದ ನಡೆದಿತ್ತು : ಆದರೆ ಕಾರಣಾಂತರದಿಂದ 'ಮಂಡಿಗೆ' ಮಾಡುವ ಅಡಿಗೆಯವನು ಬರಲಿಲ್ಲವಂತೆ. ವಿಷಯ ತಿಳಿದ ವಿಜಯದಾಸರು ಅಡಿಗೆಯವನ ವೇಷ ಧರಿಸಿ ಅವನ ಕಾರ್ಯವನ್ನು ಪೂರೈಸಿ

ಸುಧಾ ಶ್ರವಣಕ್ಕಾಗಿ ಆಗಮಿಸಿದರು. ಅನಂತರ ಸುಧಾ ಗ್ರಂಥದ ಕೆಲವು ವಾಕ್ಯಗಳ ಉಪದೇಶವನ್ನು ಮಾಡಬೇಕೆಂದು ಆಚಾರ್ಯರನ್ನು ಪ್ರಾರ್ಥಿಸಿದಾಗ ಆಚಾರ್ಯರು ಆಗ್ರಹಗೊಂಡರಂತೆ. ವಿಜಯದಾಸರು ಶಾಸ್ತ್ರ ಗ್ರಂಥಗಳನ್ನು ಗುರುಕುಲದಲ್ಲಿ ಸತತವಾಗಿ ಅಭ್ಯಾಸ ಮಾಡಿ ಅರಿತುಕೊಳ್ಳದೆ ಅಜ್ಞರಾದ ಕನ್ನಡ ಹರಿದಾಸರೆಂಬ ತಾತ್ಸಾರ ಅವರಲ್ಲಿದ್ದಿತೇನೋ? ಆಗ ದಾಸರು ಅಲ್ಲಿದ್ದ ಮೂರ್ಖನೊಬ್ಬನನ್ನು ಕರೆದು 'ಸುಧಾಗ್ರಂಥವನ್ನು ಅನುವಾದ ಮಾಡು' ಎಂದಾಗ ಆ ವ್ಯಕ್ತಿ ತಲೆ ತಗ್ಗಿಸಿದ. ಆಗ ಅವನ ತಲೆಯ ಮೇಲೆ ವಿಜಯದಾಸರು ತಮ್ಮ ಅಮೃತ ಹಸ್ತವನ್ನಿಟ್ಟು "ಆಚಾರ್ಯರಿಗೆ ಸುಧಾ ಗ್ರಂಥದಲ್ಲಿ ಅರ್ಥವಾಗದ ಸಮಸ್ಯೆಗಳನ್ನು ತಿಳಿಸಿ ಉತ್ತರಗಳನ್ನು ಹೇಳು" ಎಂದು ಆಶೀರ್ವದಿಸಿದರು. ಮೂಕನೂ, ಮೂರ್ಖನೂ ಎನಿಸಿದ್ದ ಆ ಪರಿಚಾರಕ ಕಲ್ಲೂರು ಸುಬ್ಬಣ್ಣಾಚಾರ್ಯರ ಮನಸ್ಸಿನಲ್ಲಿದ್ದ ವಿವಿಧ ಸಮಸ್ಯೆಗಳನ್ನು ಉದಾಹರಿಸಿ ಸಮರ್ಪಕವಾದ ಉತ್ತರಗಳನ್ನು ಜನಸ್ತೋಮಕ್ಕೆ ಸುಲಲಿತವಾಗಿ ವಿವರಿಸಿದನು. ಆತನ ವಾಗ್ವೈಖರಿಯನ್ನು ಕೇಳಿ ಸಭೆ ಅಚ್ಚರಿ ಪಟ್ಟಿತು. ಆಚಾರ್ಯರು ವಿಜಯದಾಸರ ತಪೋಶಕ್ತಿಗೆ ಬೆರಗಾದರು? ತಾವು ಮಾಡಿದ್ದು ಅಪಚಾರವೆಂದು ಅರಿವಾಯಿತು. ಶ್ರೀ ವಿಜಯದಾಸರನ್ನು ಕ್ಷಮೆ ಕೋರಿದಾಗ ಅವರು ತಪ್ಪುಗಳನ್ನು ಕ್ಷಮಿಸಿ ವಿಶ್ವಾಸವನ್ನು ತೋರಿದರು. 'ಶ್ರೀ ವ್ಯಾಸವಿಠಲ' ಎಂಬ ಅಂಕಿತವನ್ನು ಶ್ರೀ ವೇಣುಗೋಪಾಲವಿಠಲರ ಮೂಲಕ ಉಪದೇಶ ಪಡೆದ ಮೇಲೆ ವಿಜಯದಾಸರ ಉಪಕಾರವನ್ನು ಆಚಾರ್ಯರು ಕೃತಜ್ಞತೆಯಿಂದ ಹೀಗೆ ಕೊಂಡಾಡಿದ್ದಾರೆ.

ಸ್ಮರಿಸಿ ಬದುಕಿರೋ ದಿವ್ಯ ಚರಣಕೆರಗಿರೋ
ದುರಿತ ತರಿದು ಪೊರೆವ ವಿಜಯಗುರುಗಳೆಂಬರ
ದಾಸರಾಯನಾ ದಯವ ಸೂಸಿ ಪಡೆದನಾ
ದೋಷರಹಿತಾ ಸಂತೋಷ ಭರಿತನಾ
ಮೋದ ಭರಿತನಾ ಪಂಚ ಭೇದವರಿತನಾ
ಸಾಧು ಚರಿತನಾ ಮನ ವಿಷಾದ ಮರೆತನಾ
ವೇದ ಓದಲು ಬರಿದೆ ವಾದ ಮಾಡಲು
ಹಾದಿಯಾಗದೋ ಬುಧರ ಪಾದ ನಂಬದೆ

ಹರಿದಾಸರಾದ ಮೇಲೆ ಭರತಖಂಡದ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಆಯಾ ಮೂರ್ತಿಗಳ ಮಹಾತ್ಮೆಯನ್ನು ಚಿತ್ರಿಸಿರುವುದರಿಂದ ಇವರ ಕೃತಿಗಳು ಪ್ರವಾಸ ಸಾಹಿತ್ಯವಾಗಿಯೂ ತೋರುತ್ತವೆ. ಮಧ್ವ ಸಿದ್ಧಾಂತದ ವಿಷಯದ ವಿವರಣೆಗಾಗಿ ಅವರಿಂದ ರಚಿತವಾದ ಅಸಂಖ್ಯ ಕೃತಿಗಳಲ್ಲಿ ಐನೂರಕ್ಕೂ ಮಿಕ್ಕಿದ ಸುಳಾದಿಗಳು ಇಂದು ದೊರೆತಿವೆ. ಇದರಿಂದ ವಿಜಯದಾಸರ ಜ್ಞಾನ ಎಷ್ಟು ವಿಶಾಲವೂ ಆಳವೂ ಆಗಿದ್ದಿತೆಂದು ತಿಳಿಯಬಹುದು. ಹರಿದಾಸ ಸಾಹಿತ್ಯದ ವಿಶಿಷ್ಟ ರೂಪಗಳಾದ ಕೀರ್ತನೆ, ಸುಳಾದಿ, ಉಗಾಭೋಗ ಎಂಬ ಮೂರು ರೂಪಗಳ ಕೃತಿಗಳನ್ನು ವಿಜಯದಾಸರು ರಚಿಸಿದ್ದಾರೆ.

ಶ್ರೀ ವಿಜಯದಾಸರು ತಮ್ಮ ಬಾಳಿನ ಕೊನೆಯ ಕಾಲದಲ್ಲಿ ಹುಟ್ಟಿದೂರನ್ನು ಬಿಟ್ಟು ಈಗಿನ ಆಂಧ್ರಪ್ರದೇಶ ರಾಜ್ಯದ ಗುಂತಕಲ್‌ಗೆ ಸುಮಾರು ನಾಲ್ಕು ಮೈಲಿ ದೂರವಿರುವ 'ಚಿಪ್ಪಗಿರಿ' ಎಂಬಲ್ಲಿಗೆ ಬಂದು ನೆಲೆಸಿದರು. ಈ ಗ್ರಾಮದಲ್ಲಿ ಭೋಗೇಶ್ವರ, ಪ್ರಸನ್ನ ವೆಂಕಟೇಶ, ಚೆನ್ನಕೇಶವ ದೇವಾಲಯಗಳಿವೆ. ಈ ದೇವಾಲಯಗಳನ್ನು ಜಕಣಾಚಾರಿ ಎಂಬ ಶಿಲ್ಪಿ ಕಡೆದು ಈ ಗ್ರಾಮದಲ್ಲಿಯೇ ಕೆಲಕಾಲ ವಾಸವಾಗಿದ್ದುದರಿಂದ ಈ ಗ್ರಾಮಕ್ಕೆ 'ಶಿಲ್ಪಗಿರಿ' ಎಂದೂ ಕಾಲ ಕ್ರಮೇಣ ಊರಿನ ಇಳಿಯುವ ಬಾವಿಗಳಲ್ಲಿ ನೀರು ಸಂಪೂರ್ಣ ಒಣಗಿ ಹೋಗಿ ಚಿಲುಮೆಗಳನ್ನು ತೆಗೆದು ಚಿಪ್ಪಿನಲ್ಲಿ ಗೋಕಿ ತೆಗೆದುಕೊಳ್ಳುತ್ತಿದ್ದುದರಿಂದ 'ಚಿಪ್ಪಗಿರಿ' ಎಂಬ ಹೆಸರು ಬಂದಿತೆನ್ನುತ್ತಾರೆ. ಇಲ್ಲಿನ ದೇವಾಲಯಗಳಲ್ಲಿನ ಶಾಸನಗಳಿಂದ ಪ್ರಾಚೀನ ಕಾಲದಲ್ಲಿ ತೆಲುಗು–ಕನ್ನಡ ಎರಡು ಭಾಷೆಗಳು ಚೆನ್ನಾಗಿ ಬಳಕೆಯಲ್ಲಿದ್ದುದಾಗಿ ತಿಳಿದುಬರುತ್ತದೆ. ಪ್ರಸನ್ನ ವೆಂಕಟೇಶ ದೇವಾಲಯಕ್ಕೆ ಶಾಲಿವಾಹನ ಶಕ ವರ್ಷಂಗಳು ೧೪೫೦ನೆಯ ಸರ್ವಧಾರಿ ಸಂವತ್ಸರ ವೈ.ಬ.೩೦ನೆಯ ಸೋಮವಾರ ಸೂರ್ಯಗ್ರಹಣ ಪುಣ್ಯಕಾಲದಲ್ಲಿ ಶ್ರೀ ಕೃಷ್ಣದೇವರಾಯನು ದಾನ ಮಾಡಿದ ಭೂಮಿಯ ವಿವರಣೆಯುಳ್ಳ ಶಾಸನ ಕನ್ನಡ ಭಾಷೆ ಲಿಪಿಯಲ್ಲಿದ್ದು ಈ ಶಾಲೀವಾಹನ ಶಕ ವರುಷಂಬಲ ೧೪೭೦ ಕ್ರಿ. ಸರಿಯುಗ (ಕ್ರಿ.ಶ.೧೫೪೮)ನೇಟ ವಿಭವ ಸಂವತ್ಸರ ವೈ.ಶು.೧೫ರಂದು ನೀಡಿದ ದಾನ ಶಾಸನ ತೆಲುಗು ಭಾಷೆ ಮತ್ತು ತೆಲುಗು ಲಿಪಿಯಲ್ಲಿದೆ.

ಭಾಸ್ಕರ ಕ್ಷೇತ್ರವೆಂದು ಪ್ರಸಿದ್ಧಿಯಾಗಿರುವ ಚಿಪ್ಪಗಿರಿಯಲ್ಲಿ ವಿಜಯದಾಸರು ಇದ್ದಾಗ ಅಲ್ಲಿಯ ಚಂದಪ್ಪನೆಂಬ ಕುರುಬನೊಬ್ಬನ ಬಾವಿಯಲ್ಲಿದ್ದ ಶ್ರೀ ವೇಣುಗೋಪಾಲಕೃಷ್ಣ ವಿಗ್ರಹವನ್ನು ಅವನಿಂದಲೇ ತೆಗೆಯಿಸಿದಾಗ ದಾಸರ ಮೇಲೆ ಅವನಿಗೆ ಭಕ್ತಿಯುಂಟಾಗಿ ಅವನು ೨೦ ಎಕರೆ ಭೂಮಿಯನ್ನೂ, ಒಂದು ಕೊಳಗ ಹಣವನ್ನೂ ದಾಸರಿಗೆ ದಾನ ಮಾಡಿದನೆಂದು ಹೇಳುತ್ತಾರೆ.

ಶ್ರೀ ವಿಜಯದಾಸರು 'ಶ್ರೀ ವೇಣುಗೋಪಾಲಕೃಷ್ಣ ದೇವರ ಸುಂದರ ವಿಗ್ರಹವನ್ನು ವೃಕ್ಷದಡಿ ಸಣ್ಣಕಟ್ಟೆ ಕಟ್ಟಿ ಪ್ರತಿಷ್ಠಾಪನೆ ಮಾಡಿದರು' ಎಂದು ಹೇಳಿದ ಲೇಖಕರೇ ಶ್ರೀ ಮೊದಲ್‌ಕಲ್ ಶೇಷದಾಸರು (ಗುರು ವಿಜಯವಿಠಲರು). ವಿಜಯದಾಸರ ಕಟ್ಟೆಯ ಮೇಲೆ ದೊಡ್ಡ ವೃಂದಾವನ ತಾವೇ ಕಟ್ಟಿ ಅದರಲ್ಲಿ ಶ್ರೀ ಗೋಪಾಲಕೃಷ್ಣ ದೇವರನ್ನು ಪ್ರತಿಷ್ಠೆ ಮಾಡಿದರು ಎಂದು ಒಂದೇ ಪುಸ್ತಕದಲ್ಲಿ ತಿಳಿಸಿದ್ದಾರೆ. ಒಂದು ವಿಗ್ರಹಕ್ಕೆ ಒಂದೇ ಜಾಗದಲ್ಲಿ ಎರಡು ಸಲ ಪ್ರತಿಷ್ಠೆಯಾಗುವುದು ಹೇಗೆ ಸಾಧ್ಯ? ಶ್ರೀ ಗುರು ವಿಜಯವಿಠಲರು ಈ ಗುಡಿಯ ಜೀರ್ಣೋದ್ಧಾರ ಮಾಡಿರಬೇಕೆನಿಸುತ್ತದೆ.

ಶ್ರೀ ವಿಜಯದಾಸರಿಗೆ ದಾನವಾಗಿ ಬಂದ ಭೂಮಿಯಲ್ಲಿದ್ದ ಕೊಳ 'ವಿಜಯ ತೀರ್ಥ'ವೆಂದು ಪ್ರಸಿದ್ಧಿಯಾಗಿದೆ. ಏಕಾಂತದ ಬೀಡಾಗಿ, ತಪಸ್ವಿಗಳಿಗೆ ಶಾಂತವೂ ಪರಿಶುದ್ಧವೂ ಆದ ಭಾವನೆಯನ್ನುಂಟು ಮಾಡುವಂತಹ ಪವಿತ್ರವಾದ ಚಿಪ್ಪಗಿರಿಯಲ್ಲಿ ವಿಜಯದಾಸರು ತಿರುಪತಿಯ ಬ್ರಹ್ಮೋತ್ಸವ ಯಾತ್ರೆಯನ್ನು ಮಾಡಿ ಹಿಂದಿರುಗಿದ ಮೇಲೆ ಕ್ರಿ.ಶ.೧೭೫೫ನೆಯ ಕಾರ್ತೀಕ ಶುದ್ಧ ದಶಮಿ ಗುರುವಾರ ವಿಜಯವಿಠಲನ ಪಾದವನ್ನು ನಿಶ್ಚಿಂತೆಯಿಂದ ಸೇರಿದರು.

ತೆರಳಿಪೋದರು ಸಿರಿಹರಿಯ ಪುರಕೆ ಪ
ಕರಿರಾಜ ವರದನ್ನ ಸ್ಮರಿಸುತ್ತ ವಿಜಯದಾಸರು ಅ.ಪ
ಯುವ ಸಂವತ್ಸರ ಕಾರ್ತೀಕ ಶುದ್ಧ
ಅವಿರುದ್ಧವಲ್ಲದಲೆ ಶುದ್ಧ ದಶಮೀ
ನವನಾಡಿಗುರುವಾರ ದಿವಿಜರ ಮೇಳದಲಿ
ಭಳಿ ಭಳಿ ನಗೆ ಮುಖದಿಂದ ಹರಿ ಚರಿತೆ ಪಾಡುತಲಿ ೧

. . . . . . . . . . . . . . . . . . . .

. . . . . . . . . . . . . . . . . . . .

ಅಪ್ಪ ತಿಮ್ಮಪ್ಪನಾ ಯಾತ್ರಿ ಮಾಡಿಕೊಂಡು
ಚಿಪ್ಪಗಿರಿಯೆಂಬ ಗ್ರಾಮದಲೆ
ಚಪ್ಪಾಳೆ ನಿಕ್ಕುತಲಿ ನಮ್ಮ ದಾಸರು ನೋಡೆ
ಸರ್ಪಶಯನ ಹಯವದನ ವಿಠಲನ ಬಳಿಗೆ ॥

ಎಂದು ವಿಜಯದಾಸರ ಸೋದರರಾದ 'ಹಯವದನ ವಿಠಲ'ರು ಹೇಳಿದ್ದಾರೆ.

ಚಿಪ್ಪಗಿರಿಯಲ್ಲಿ ಶ್ರೀ ವಿಜಯದಾಸರ ದೇಹ ಅಗ್ನ್ಯಂತರ್ಗತ ಪರಶುರಾಮಗೆ ಅರ್ಪಿಸಿದ ಸ್ಥಳದಲ್ಲಿ ಶ್ರೀ ಗೋಪಾಲದಾಸರು ಮೋಹನದಾಸರು ಮುಂತಾದವರೇ ಒಂದು ಕಟ್ಟೆ ಕಟ್ಟಿಸಿ ಪೂಜಾ ಮಾಡಹತ್ತಿದರು. ಕೆಲವರ್ಷದ ನಂತರ ಶ್ರೀ ಮೋಹನದಾಸರು ಚಿಪ್ಪಗಿರಿಯಲ್ಲೆ ಪರಲೋಕ ಯಾತ್ರೆಗೈದರು. ಆ ಜ್ಞಾನಿಗಳ ಪವಿತ್ರ ದೇಹವಾದರೂ ಅವರ ಆಜ್ಞೆಯಂತೆ ಶ್ರೀ ವಿಜಯರಾಯರ ಕಟ್ಟೆಯ ಸಮೀಪ ಪೂರ್ವ ಭಾಗದ ಸ್ಥಳದಲ್ಲಿ ಪರಶುರಾಮನಿಗೆ ಸಮರ್ಪಿಸಿದರು. ನಂತರ ಆ ಸ್ಥಳದಲ್ಲಿಯೇ ಶ್ರೀ ಮೋಹನದಾಸರ ಕಟ್ಟೆ ಕಟ್ಟಿಸಿದರು. ಎರಡು ಕಟ್ಟೆಗಳು ಕೂಡಿಸಿ ಕಟ್ಟೆಯ ಮೇಲೆ ಗುಡಿಯಾಯಿತು ಎಂದು ಶ್ರೀ ಗೋರಬಾಳ ಹನುಮಂತ ರಾಯರು ತಿಳಿಸಿರುವರು. ಆದರೆ ಈ ದಾಸರ ವಂಶೀಯರು ವಿಜಯದಾಸರ ದೇಹವನ್ನು ಅಗ್ನ್ಯಂತರ್ಗತ ಪರಶುರಾಮನಿಗೆ ಅರ್ಪಿಸಿದ ಸ್ಥಳದಲ್ಲಿ ಕಟ್ಟೆಯನ್ನು ಕಟ್ಟಿಲ್ಲವೆಂದೂ ವಿಜಯದಾಸರು ವೇಣುಗೋಪಾಲಕೃಷ್ಣನ ವಿಗ್ರಹವನ್ನು ಈಗಿರುವ ಜಾಗದಲ್ಲಿ ಪ್ರತಿಷ್ಠಾಪಿಸಿ ಆ ಸ್ಥಳದಲ್ಲಿ ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದರೆಂದೂ, ವಿಜಯದಾಸರು ಕುಳಿತುಕೊಳ್ಳುತ್ತಿದ್ದ ಕಟ್ಟೆಗೆ 'ವಿಜಯದಾಸರಕಟ್ಟೆ' ಎಂದು ಕರೆಯುವರೆನ್ನುತ್ತಾರೆ.

ಚಿಪ್ಪಗಿರಿಯಲ್ಲಿ ಇಂದಿಗೂ ಪ್ರತಿವರ್ಷವೂ ಕಾರ್ತೀಕ ಮಾಸದ ಶುದ್ಧ ನವಮೀ, ದಶಮೀ, ಏಕಾದಶಿ ಮತ್ತು ದ್ವಾದಶಿ ದಿನಗಳಲ್ಲಿ ಶ್ರೀ ವಿಜಯದಾಸರ ಆರಾಧನಾ ಮಹೋತ್ಸವ ವಿಜೃಂಭಣೆಯಿಂದ ನಡೆಯುತ್ತದೆ. ಈ ಸಂದರ್ಭದಲ್ಲಿ ಅವರ ವಂಶೀಯರು ಶ್ರೀ ವಿಜಯದಾಸರು ಉಪಯೋಗಿಸುತ್ತಿದ್ದ ತಂಬೂರಿಯನ್ನು ಉತ್ಸವದಲ್ಲಿ ತೋರಿಸುತ್ತಾರೆ. ವಿಜಯದಾಸರ ಜನ್ಮ ಸ್ಥಳವಾದ ಚೀಕನ ಪರಿವಿಯಲ್ಲಿ

ದಾಸರು ಉಪಯೋಗಿಸುತ್ತಿದ್ದ ಸಾಣೆಯಕಲ್ಲು ಹಾಗೂ ಚಿಟಿಕೆಗಳನ್ನು ಇಂದಿಗೂ ಕಾಣಬಹುದಾಗಿದೆ.

ಅಪರೋಕ್ಷ ಜ್ಞಾನಿಗಳೆಂದು ಪ್ರಸಿದ್ಧರಾಗಿರುವ ಶ್ರೀ ವಿಜಯದಾಸರು ಸಾಹಿತ್ಯ ದೃಷ್ಟಿಯಿಂದ ಬೆಲೆಯುಳ್ಳ, ತತ್ತ್ವಶಾಸ್ತ್ರ ದೃಷ್ಟಿಯಿಂದ ಅಮೂಲ್ಯವೆನಿಸುವಂತಹ ಪದ-ಸುಳಾದಿ ಹಾಗೂ ಉಗಾಭೋಗಗಳನ್ನು ರಚಿಸಿ ಮಹತ್ತರ ಕಾಣಿಕೆ ನೀಡಿದ್ದಾರೆ. ಇವರ ನಡೆ, ನುಡಿಗಳು ಆದರ್ಶವಾದುದು-ಅನುಸರಣೀಯವಾದುದು. ಇಂತಹ ದಯಾಮಯ ಚೇತನವೇ ಲೋಕದಲ್ಲಿ ವಿರಳವೆನ್ನಬಹುದು. ಇಂತಹ ವಿರಳ ವ್ಯಕ್ತಿಗಳ ಗುಂಪಿಗೆ ಸೇರಿದ ಅನರ್ಘ್ಯ ರತ್ನಗಳಲ್ಲಿ ಒಂದು ರತ್ನ ಕನ್ನಡ ನಾಡಿನ ಭಾಗ್ಯೋದಯದಿಂದ ಒಲಿದು ಬಂದುದು ಕನ್ನಡಿಗರ ಪುಣ್ಯ ವಿಶೇಷವೆನ್ನಬಹುದು.

## ಕ್ಷೇತ್ರದರ್ಶನ ಸುಳಾದಿಗಳ ಬಗ್ಗೆ

ಈ ಸಂಪುಟದಲ್ಲಿ ವಿಜಯದಾಸರು ರಚಿಸಿರುವ ತೀರ್ಥಕ್ಷೇತ್ರಗಳಿಗೆ ಸಂಬಂಧಿಸಿದ ಸುಳಾದಿಗಳನ್ನು ಸಂಗ್ರಹಿಸಲಾಗಿದೆ. ಕ್ಷೇತ್ರ ಪರ್ಯಟನ ಕೇವಲ ಹಿಂದಿನ ಕಾಲದಲ್ಲಿರಲಿಲ್ಲ. ಇಂದೂ ಉಂಟು. ಆಧುನಿಕ ಜನ ಜೀವನದ ಪ್ರಮುಖ ಮನೋರಂಜಕ ಕಾರ್ಯಕ್ರಮಗಳಲ್ಲಿ ಪ್ರವಾಸವೂ ಸೇರಿದೆ. ಇದೊಂದು ಮನೋಲ್ಲಾಸಕ ಕ್ರಿಯೆ. ಹಿಂದಿನ ಕಾಲದಲ್ಲಿ ಜನ ನಡೆದು ಪ್ರೇಕ್ಷಣೀಯ ಸ್ಥಳಗಳನ್ನು ನೋಡುತ್ತಿದ್ದರು. ಹಣವಿದ್ದವರು ಎತ್ತಿನ ಗಾಡಿ-ಕುದುರೆ ಗಾಡಿಗಳಲ್ಲಿ ಪ್ರಯಾಣಿಸುತ್ತಿದ್ದರು. ಇಂದು ಜನ ರೈಲು, ಬಸ್ಸು, ಕಾರು, ವಿಮಾನಗಳಲ್ಲಿ ಪ್ರಯಾಣಿಸಿ ಪ್ರವಾಸ ಸುಖವನ್ನನುಭವಿಸುತ್ತಿದ್ದಾರೆ. ವಿದೇಶಗಳಲ್ಲಿ ಈ ಪ್ರವಾಸದ ಸಲುವಾಗಿಯೇ ವಾರಕ್ಕೆ ಐದು ದಿನಗಳು ಮಾತ್ರ ಕೆಲಸದ ದಿನಗಳೆಂದು ಪರಿಗಣಿತವಾಗಿದೆ. ತೀರ್ಥಕ್ಷೇತ್ರ ಸಂದರ್ಶನಗಳಿಂದ ಮಾನವನ ಮನಸ್ಸು ಉಲ್ಲಾಸಗೊಳ್ಳುತ್ತದೆ. ಅಲ್ಲದೆ, ದೇಶ ತಿರುಗುವುದರಿಂದ ಅನುಭವ ವಿಸ್ತಾರವಾಗುತ್ತದೆ. ಭರತಖಂಡದ ಕ್ಷೇತ್ರಗಳು ಕೇವಲ ಭಗವಂತನ ಸನ್ನಿಧಾನ ವಿಶೇಷತೆಯಿಂದ ಮಾತ್ರ ಪ್ರಾಮುಖ್ಯವನ್ನು ಪಡೆದಿಲ್ಲ. ಇಲ್ಲಿನ ವಾಸ್ತುಶಿಲ್ಪ, ಮೂರ್ತಿಶಿಲ್ಪಗಳು ಜನರನ್ನು ಚಕಿತಗೊಳಿಸುವಂತಿದೆ. ಭರತ ಖಂಡದಲ್ಲಿ ಆ ಸೇತು ಹಿಮಾಚಲದವರೆಗೆ ಇರುವ ಕ್ಷೇತ್ರಗಳಲ್ಲಿರುವ ಆಭರಣಗಳು ಪ್ರಾಚೀನಕಾಲದಲ್ಲಿ ಆಭರಣ ತಯಾರಕರಿಗೆ ಅವರ ಕಲಾಪ್ರೌಢಿಮೆಯನ್ನು

ಮೆರೆಯಲು ಅವಕಾಶ ಮಾಡಿಕೊಟ್ಟಿರುವುದನ್ನು ಸಾರುತ್ತಿದೆ. ಈ ಆಭರಣಗಳ ಕುಸುರಿಕೆಲಸ, ಅದರಲ್ಲಿರುವ ಚಿನ್ನ-ನವರತ್ನಗಳ ಮೌಲ್ಯವೆಷ್ಟೆಂಬುದನ್ನು ಬೆಲೆ ಕಟ್ಟಲು ಸಾಧ್ಯವಿಲ್ಲ. ನಮ್ಮ ಪ್ರಾಚೀನರ ಧಾರ್ಮಿಕ ಶ್ರದ್ಧೆ ನಾಡಿನ ಶ್ರೀಮಂತರನ್ನು ದಾನಿಯನ್ನಾಗಿಸಿತು. ಶಿಲ್ಪಿಗಳಿಗೂ, ಅಕ್ಕಸಾಲಿಗಳಿಗೂ, ಸ್ಥಪತಿಗಳಿಗೂ ಜೀವನ ಮಾರ್ಗವನ್ನು ಕಲ್ಪಿಸಿತು. ಭಕ್ತರಿಗೆ ಮಾನಸಿಕ ತೃಪ್ತಿಯನ್ನುಂಟುಮಾಡಿತು. ಬಡವರು ನಿತ್ಯ ಪ್ರಸಾದ ಭುಂಜಿಸುವಂತಾಯಿತು. ವಿಜಯದಾಸರು ತಮ್ಮ ದಾಸ ಜೀವನದಲ್ಲಿ ಪ್ರತಿವರ್ಷ ಆಷಾಡ ಏಕಾದಶಿಯಂದು ಪಂಡರಪುರಕ್ಕೂ, ನವರಾತ್ರಿಯಲ್ಲಿ ತಿರುಪತಿಗೂ, ಮಧ್ವನವಮಿಗೆ ಉಡುಪಿಗೂ ಹೋಗುತ್ತಿದ್ದರಂತೆ. ಜೊತೆಗೆ ಭರತಖಂಡದ ಎಲ್ಲ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದರು. ಅವರಿಗೆ ಪುಣ್ಯಕ್ಷೇತ್ರಗಳ ದರ್ಶನದಿಂದುಂಟಾಗುತ್ತಿದ್ದ ತೃಪ್ತಿಯು ಪುಣ್ಯಕ್ಷೇತ್ರಗಳ ಸ್ಮರಣೆಯಿಂದಲೂ ಆಗುತ್ತಿದ್ದಿತಂತೆ। ಆದ್ದರಿಂದ 'ಪುಣ್ಯಕ್ಷೇತ್ರವ ಸ್ಮರಿಸಿ ಧನ್ಯರಾಗಿರೋ ನಿಮ್ಮ ಮನ್ಯು ಮಿಕ್ಕಾದ ಮಹದನ್ಯಾಯ ಮೆರೆದು ಅನುಗುಣ್ಯದಲ್ಲಿರೆ ಭವದಾರಣ್ಯ ದಹಿಸುವುದು ಕಾರುಣ್ಯದಲಿ ಹರಿ ಒಲಿವಾ' ಎಂದಿದ್ದಾರೆ. ವಿಜಯದಾಸರು ಈ ತೀರ್ಥಕ್ಷೇತ್ರಗಳಿಗೆ ಯಾತ್ರೆ ಮಾಡಿದುದರ ಜೊತೆಗೆ ಈ ಕ್ಷೇತ್ರ ಮಹಾತ್ಮೆಯನ್ನು ಕುರಿತು ಪದ ಮತ್ತು ಸುಳಾದಿಗಳನ್ನು ಭಾವುಕತೆಯಿಂದ ರಚಿಸಿದರು. ವಿಜಯದಾಸರು ಸುಳಾದಿಗಳನ್ನು ತೀರ್ಥಕ್ಷೇತ್ರವನ್ನು ಕುರಿತು ರಚಿಸಿದ್ದಾರೆ. ಇದರಲ್ಲಿ ಭಾರತದ ಪೂರ್ವ, ಪಶ್ಚಿಮ, ದಕ್ಷಿಣ ಹಾಗೂ ಉತ್ತರ ಭಾಗದ ಹಲವು ಕ್ಷೇತ್ರಗಳ ಚರಿತ್ರೆಯುಂಟು. ಪುರಾಣ ಪ್ರಸಿದ್ಧವಾದ ಕಥೆಗಳನ್ನು ಈ ಸುಳಾದಿಗಳಲ್ಲಿ ವಿಜಯದಾಸರು ಸೂಚಿಸಿದ್ದಾರೆ. ಮೂವತ್ತೈದು ಕ್ಷೇತ್ರಗಳನ್ನು ಕುರಿತು ವಿಜಯದಾಸರು ರಚಿಸಿರುವ ಸುಳಾದಿಗಳು ಮಾತ್ರ ದೊರಕಿವೆ. ಸಾಮಾನ್ಯವಾಗಿ ಒಂದು ಕ್ಷೇತ್ರವನ್ನು ಕುರಿತು ಒಂದೇ ಒಂದು ಸುಳಾದಿಯನ್ನು ರಚಿಸಿರುವರಾದರೂ ಹಂಪೆ, ಶ್ರೀಶೈಲ, ಕಂಚಿ, ಕುರಂಗ, ಗಯಾ, ತೋತಾದ್ರಿ, ಮಧುರೆ, ಶ್ರೀರಂಗ, ಹಂಪೆ, ಹರಿಹರ ಕ್ಷೇತ್ರಗಳನ್ನು ಕುರಿತು ಎರಡೆರಡು ಸುಳಾದಿಗಳನ್ನು, ಉಡುಪಿ, ಅನಂತಶಯನ, ಕಾಶಿ, ತಾಮ್ರ ಪರ್ಣಿ, ಪಂಡರಾಪುರ, ರಾಮೇಶ್ವರಗಳನ್ನು ಕುರಿತು ಎರಡಕ್ಕಿಂತ ಹೆಚ್ಚು ಸುಳಾದಿಗಳನ್ನು ರಚಿಸಿರುವರು. ಆದರೆ ವಿಜಯದಾಸರ ಮತ್ತು ಸಕಲ ದಾಸರ ಆರಾಧ್ಯ ದೈವವೆನಿಸಿರುವ ಶ್ರೀನಿವಾಸನ ಸ್ಥಳವಾದ ತಿರುಪತಿ-ತಿರುಮಲೆಯನ್ನು ಕುರಿತು ಮೂವತ್ತಾರು ಸುಳಾದಿಗಳನ್ನು

ರಚಿಸಿರುವರು. ಇದು ವಿಜಯದಾಸರಿಗೆ ತಿರುಪತಿಯ ಶ್ರೀನಿವಾಸನ ಮೇಲಿದ್ದ ಅತ್ಯಧಿಕ ಭಕ್ತಿಯ ದ್ಯೋತಕವಾಗಿದೆ. ಪುರಂದರದಾಸರು ಒಂದು ಕೀರ್ತನೆಯಲ್ಲಿ ಹರಿದಾಸರ ಶರೀರವೇ ಭರತಖಂಡದ ತೀರ್ಥಕ್ಷೇತ್ರಗಳ ಮಹಾ ಸಂಗಮ ಎಂದಿರುವುದುಂಟು.

ಹರಿಸ್ಮರಣೆ ಮಾಡುವರು ನರರಲ್ಲವೋ ।
ಶರೀರವದು ಎಲ್ಲರಂತಲ್ಲವರದು
ಮುರಹರಗೆರಗುವ ಶಿರ ದ್ವಾರಕಾಪುರವು ।
ಚರಿತೆ ಕೇಳುವ ಕರ್ಣ ಗೋಕರ್ಣವು
ಬರಿದು ಹೊಗಳುವ ಜಿಹ್ವೆ ನಿಜ ಕ್ಷೀರಸಾಗರವು ।
ಚರಣ ಪೂಜಿಸುವ ಕರಗಳು ರಾಮೇಶ್ವರ ೧
ವಿಷ್ಣು ನಿರ್ಮಾಲ್ಯ ಘ್ರಾಣಿಸುವ ನಾಶಿಕ ಕಂಚಿ ।
ಕೃಷ್ಣನ ನೋಡುವ ದೃಷ್ಟಿ ಶ್ರೀ ಮುಷ್ಣವು
ವಿಠಲಗರ್ಪಿತವೆಂಬುವ ಉದರವೇ ಬದರಿ ।
ಘಟ್ಯಾದಿ ಹರಿ ಇಪ್ಪ ಹೃದಯವೇ ವೈಕುಂಠ ೨
ವರಜಂಘೆ ಪದ ಗಂಗೆ–ತುಂಗೆ ಎಂದೆನಿಸುವುದು ।
ಸರುವಾಲಗನಂತಾಸನ ಸಿತದ್ವೀಪ ।
ಬರಿಯ ಮಾತಲ್ಲವಿದು ಶ್ರುತಿ ಪುರಾಣಗಳುಕ್ತಿ ।
ಪುರಂದರವಿಠಲ ಅವರೊಶದೊಳಿಹನು ೩

ಇಂತಹ ತೀರ್ಥ ಕ್ಷೇತ್ರಗಳನ್ನು ಕುರಿತು ರಚನೆಗೊಂಡ ವಿಜಯದಾಸರ ಸುಳಾದಿಗಳನ್ನು ಜನ ಸಾಮಾನ್ಯರಿಗಾಗಿ ಪ್ರಕಟಿಸಲಾಗುತ್ತಿದೆ. ಈ ಸಂಪುಟದಲ್ಲಿ ತೀರ್ಥಕ್ಷೇತ್ರಗಳಿಗೆ ಸಂಬಂಧಿಸಿದ ವಿಜಯದಾಸರ ೧೦೧ ಸುಳಾದಿಗಳನ್ನು ಸಂಗ್ರಹಿಸಲಾಗಿದೆ.

ಇದು ಜನಪ್ರಿಯ ಆವೃತ್ತಿಯಾಗಿರುವುದರಿಂದ ಇಲ್ಲಿ ಸಂಪಾದಿತಗೊಂಡಿರುವ ಸುಳಾದಿಗಳಿಗೆ ಪಾಠಾಂತರವನ್ನು ಸೂಚಿಸಿಲ್ಲ. ಪಾಠಕ್ಲೇಶವಿದ್ದು ಊಹಾತ್ಮಕ ಪರಿಷ್ಕರಣ

ಮಾಡಿದ ಸಂದರ್ಭಗಳಲ್ಲಿ ತಿದ್ದಿದ ಅಕ್ಷರ ಹಾಗೂ ಪದಗಳನ್ನು ಕಂಸದಲ್ಲಿ [ ] ಸೂಚಿಸಲಾಗಿದೆ. ಅಧಿಕ ಸಂಖ್ಯೆಯಲ್ಲಿ ವಿಜಯದಾಸರ ಸುಳಾದಿಗಳ ಪ್ರತಿಗಳು ದೊರಕದ ನಿಮಿತ್ತ ಎಲ್ಲ ಪಾಠಕ್ಲೇಶಗಳನ್ನು ಸರಿಪಡಿಸಲು ಸಾಧ್ಯವಾಗಿಲ್ಲ.

ಕ್ಷೇತ್ರ ದರ್ಶನ ಸುಳಾದಿಗಳ ಸಂಪಾದನೆಯ ಸಂದರ್ಭದಲ್ಲಿ ನನ್ನ ಸಹೋದ್ಯೋಗಿ ಪ್ರೊ. ಎ. ಅನಂತನರಸಿಂಹಾಚಾರ್ಯರು ಹಲವು ರೀತಿಗಳಲ್ಲಿ ನನಗೆ ನೆರವಾಗಿದ್ದಾರೆ. ಇವರಿಗೆ ನನ್ನ ಕೃತಜ್ಞತೆಗಳು. ಶ್ರೀ ವಿಜಯದಾಸರ ಸುಳಾದಿಗಳನ್ನು ಕೂಲಂಕಷವಾಗಿ ಮತ್ತೊಮ್ಮೆ ಅಧ್ಯಯನಮಾಡುವ ಸುಯೋಗ ಈ ಸಂಪಾದನಾ ಕಾರ್ಯವನ್ನು ನನಗೆ ಸಂಸ್ಕೃತಿ ಇಲಾಖಾ ನಿರ್ದೇಶಕರು ಹಾಗೂ ಸಮಗ್ರ ದಾಸವಾಙ್ಮಯ ಪ್ರಕಟಣ ಸಮಿತಿ ವಹಿಸಿದ ನಿಮಿತ್ತ ಸಾಧ್ಯವಾಯಿತು. ಇದಕ್ಕೆ ಸಮಿತಿಯ ಸದಸ್ಯರಿ-ಗೆಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳು. ಕಾರ್ಯನಿರ್ವಾಹಕ ಸಂಪಾದಕರಾದ ಡಾ॥ ಟಿ.ಎನ್.ನಾಗರತ್ನ ಅವರ ಒತ್ತಾಸೆಯಿಲ್ಲದಿದ್ದರೆ ಈ ಕಾರ್ಯ ಪೂರ್ಣ-ಗೊಳ್ಳುತ್ತಿರಲಿಲ್ಲ. ಆದ್ದರಿಂದ ಇವರಿಗೆ ನನ್ನ ವಿಶೇಷ ಕೃತಜ್ಞತೆಗಳು.

–ಡಾ. ಕೆ.ಗೋಕುಲನಾಥ

# ಅನುಬಂಧಗಳು

೧. ಕಠಿಣಶಬ್ದಗಳ ಅರ್ಥ
೨. ಟಿಪ್ಪಣಿಗಳು
೩. ಸುಳಾದಿಗಳ ಅಕಾರಾದಿ
೪. ಸುಳಾದಿಗಳ ಕ್ಷೇತ್ರಾನುಕ್ರಮಣಿಕೆ

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

ಅರ್ಕಮಂಡಲ – ಸೂರ್ಯಮಂಡಲ
ಅಂಗುಲಿ – ಬೆರಳು
ಅಂಡಜ – ಗರುಡ
ಅಂಡಜ
ಗಮನ – ವಿಷ್ಣು
ಅಂತಕ – ಯಮ
ಅಂತರಿಕ್ಷ – ಆಕಾಶ
ಅಂದಿಗೆ – ಗೆಜ್ಜೆ
ಅಂಬಕ – ಕಣ್ಣು
ಅಂಬಕ ತ್ರಯ – ಮೂರು
ಕಣ್ಣುಳ್ಳವನು – ಶಿವ
ಅಂಬು – ನೀರು, ಬಾಣ
ಅಂಬುಜನಾಭ – ಪದ್ಮನಾಭ–ವಿಷ್ಣು
ಅಂಬುರಾದ್ಯರು – ದೇವತೆಗಳು
ಅರ್ಕ – ಸೂರ್ಯ
ಅಘಾರ್ವದಾವ – ಪಾಪವೆಂಬ
ಅರಣ್ಯಕ್ಕೆ ಬೆಂಕಿ
ಅಟ್ಟುಳಿಗ – ತೊಂದರೆ
ಅಣಗೊತ್ತಿ – ತಗ್ಗುವಂತೆ
ಅದುಮಿ
ಅಧೋಭುವನ – ಕೆಳಗಿನ ಲೋಕ
ಅವಳಾಕ್ಷ – ಶಿವ
ಅನಿರ್ಜರರು – ದೇವತೆಗಳಲ್ಲದವರು

ಅನಿಮಿಷ – ದೇವತೆ
ಅನುತಾಪ – ದುಃಖ
ಅನುರೂಹ ಯೋಗ್ಯರಿಂದ
ವಂದ್ಯ – ನಮಸ್ಕಾರ
ಪಡೆದವನು
ಅನುವರ – ಯುದ್ಧ
ಅನುಶಾಪ – ಶಾಪದ ಮೇಲೆ
ಮತ್ತೊಂದು ಶಾಪ/
ಪರಿಹಾರ
ಅಪವರ್ಗ – ಮೋಕ್ಷ
ಅಪಾಪ – ಪುಣ್ಯ
ಅಪೂಟ – ಪೂರ್ಣ
ಅಮಲೊಸ – ಬಟ್ಟೆಯು
ಗನಾಗದಿರು ಬೆಳ್ಳಗಾಗದಿರಲು
ಅಯೋನಿಜ – ಗರ್ಭವಾಸವಿಲ್ಲದವ
ಅರವರ್ಜಿತ – ಪಾಪರಹಿತ
ಅರಿ – ಚಕ್ರಾಯುಧ / ಶತ್ರು
ಅಲವಬೋಧ
ಮುನಿ – ಮಧ್ವಾಚಾರ್ಯ
ಅಶನಿ – ವಜ್ರಾಯುಧ
ಅಸಿತಸುಳಿಗುರುಳು–ಕಪ್ಪಾದ ಸುಳಿ
ಸುಳಿಯಾದ ಕೂದಲು
ಅಸಮನೇತ್ರ – ಶಿವ

## ೧. ತೀರ್ಥಸ್ತೋತ್ರ

### ಧ್ರುವತಾಳ

ತೀರ್ಥಾಭಿಮಾನಿಗಳಿರೇ ವಂದಿಸುವೆನು ನಿಮಗೆ ।
ಸ್ವಾರ್ಥಕ ಮತಿಬಿಡಿಸಿ ನಿತ್ಯ ಪಾರ ।
ಮಾರ್ಥಿಕ ಜ್ಞಾನವ ಕೊಟ್ಟು ಕರುಣದಿಂದ ।
ಸಾರ್ಥಕ ಮಾಡಿಸುವುದು ಸಕಲ ಪುಣ್ಯ ।
ತೀರ್ಥಕ್ಷೇತ್ರ ಮೂರ್ತಿಯಲ್ಲಿದ್ದ ಭಗವಂತ ।
ಸಾರ್ಥಿಯಾಗಲಿ ಎನಗೆ ದಿನ ಪ್ರತಿದಿನ ।
ಸಾರ್ಥಿಕನಂತೆ ಮಾಡಿದ ಕರ್ಮಕಲಕಾಲ ।
ವ್ಯರ್ಥವಾಗುವ ಪರಿ ಮಾಡದಿರೀ ।
ಅರ್ಥ ಆತುಬಿಡಿಸಿ ಭಗವದ್ಭೋಸುಗ ಅ ।
ನರ್ಥಾಂತರ ಜ್ಞಾನ ಪಾಲಿಸಬೇಕು ।
ಪ್ರಾರ್ಥನೆ ಮಾಡುವೆ ಪ್ರಯಾಸವಾಗದಂತೀ ।
ಪಾರ್ಥಿವದೊಳಗಿದ್ದು ಧನ್ಯನ ಮಾಡೀ ।
ಆರ್ಥ ಪಂಚಮಿಕ್ಕಮಾನಿಗಳು ಯ ।
ತಾರ್ಥ ಜ್ಞಾನವೆ ಕೊಡಲಿ ನಿಮ್ಮಿಂದಲೀ, ಮೂ ।
ಹೂರ್ತವಾದರು ಕಾಲ ಬರಿದಾಗದಂತೆ, ಕೃ।
ತಾರ್ಥನ್ನ ಮಾಡುವುದು ಎಲ್ಲಿದ್ದರೂ ।
ತೀರ್ಥಪಾದ ನಮ್ಮ ವಿಜಯ ವಿಠಲ, ಸ।
ರ್ವಾರ್ಥ ಪ್ರದಾತನೆಂಬೊ ಮುಖ್ಯಜ್ಞಾನವೆ ಇರಲಿ ೧

### ಮಟ್ಟತಾಳ

ಆವಾವ ತೀರ್ಥದಲಿ ವಾಸವಾಗಿದ್ದ ।
ದೇವತತಿಗಳಿರೇ ಧೈರ್ಯವನೆ ಇತ್ತು ।

ಪಾವನ ಮಾಡುವುದು ಸ್ನಾನಾದಿ ಎಲ್ಲಿದ್ದ ।
ದೈವವಶದಿಂದ ಬೇಡಿಕೊಂಬೆನೊ ನಿಮ್ಮ ನಾ ।
ಸಾವಂಶರಾಗಿ ಸಂಚರಿಸುವ ಯೋಗ ।
ಆವಾವ ಕಾಲಕೆ ಅಪ್ರತಿಯಾಗಿದೆ ।
ದೇವದೇವೇಶ ಸಿರಿ ವಿಜಯವಿಠಲನ್ನ ।
ಭಾವದಲ್ಲಿ ಭಜಿಪ ಭಾಗ್ಯವಂತರೆ ಸತತ ೨

## ತ್ರಿವಿಡಿತಾಳ

ದಶ ಇಂದ್ರಿಯಂಗಳಲ್ಲಿ ಬಲು ಬಗದೆ ಬಗೆಯಿಂದ ।
ದಶ ದಿಕ್ಕುಗಳ ತಿರುಗಿ ಮರೆಯಾದೆ ಇಲ್ಲದೆ ।
ಅಶನ ಉದಕ ದ್ರವ್ಯ ವಸ್ತ್ರ ಮುಂತಾದ ಘ ।
ಪ್ರಸರ ಕೋಟಿಯೊಳಗೆ ಮುಣಿಗಿ ತೇಲಿ ।
ಕುಶಲಗತಿಯ ಮರದು ಕೈಕೊಂಡು ದೇಹ ಪಾ ।
ಲಿಸಿಕೊಂಡೆ ನಾನು ನನ್ನದು ಎನುತಲಿ ।
ಬೆಸನ(ನೆ) ಕೇಳಿ ಸರ್ವತೀರ್ಥವಾಸಿಗಳೆ ಮಹ ।
ಪುಶಿ ಮೊದಲಾದ ಪಾಪ ಪ್ರವರ್ತಕ ।
ತ್ರಿಸರೇಣು ಕಾಲವಾದರು ಪುಣ್ಯ ಮಾಧವ ।
ಪಶುಮನುಜನು ನಾನು ಎನ್ನ ನೋಡಿ ।
ಉಸರಲೇನು ಇನ್ನು ನಾಲಿಗೆಂಬೋದಿಲ್ಲ ।
ಯಶಸು ನಿಮ್ಮದು ಮುಂದೆ ಪೊರೆವ ಭಾರ ।
ವಸುಧಿಯೊಳಗೆ ಆವಪರಿಯುಂಟೊ ತಿಳಿಯೆ ವಂ ।
ದಿಸುವೆನೊ ತಲೆವಾಗಿ ತವಕದಿಂದ ।
ಋಷಿ ಛಂದಸ್ಸು ದೇವತ ಗೋಳಕ ಚಿಂ ।
ತಿಸುವ ಮತಿ ಕಾಣೆನೊ ತೀರ್ಥದಲ್ಲಿ ।
ಹಸಿವೆಗೋಸುಗ ಅನ್ನ ಉಂಡಂತೆ ಅಲ್ಲದೆ ।
ಬೆಸಸೂವೆ ಎನ್ನ ಕರ್ಮಾಚರಣೆ ।
ದಶಮೂರ್ತಿ ವಿಜಯವಿಠಲರೇಯನ ಪಾದ ।
ವಶಮಾಡಿಕೊಂಡಿಪ್ಪ ಜ್ಞಾನಯೋಗಿಗಳೆ ೩

## ಅಟ್ಟತಾಳ

ಮುಗ್ಧ ಜನರೊಳಿದ್ದು ಮಾಡಿದ ಕರ್ಮವ ।
ದಗ್ಧ ಮಾಡುವುದು ದಯದೃಷ್ಟಿಯಲಿ ನೋಡಿ ।
ದಿಗ್ದೇಶದೊಳು ನಿಮ್ಮ ಮಹಿಮಿಗೆ ಎಣೆಗಾಣೆ ।
ದಿಗ್ದಂತಿಗೆ ಅಂಕುಶ ಒಂದು ಸಾಲದೆ ।
ದಿಗ್ದಂಡಮಾಡು (ವೆ) ಅತಿ ಪ್ರತಾಪರಿಗೆ ಈ ।
ಳುಗ್ಧಳ ಹಿಂದು ಮಾಡುವದು ಅರಿವೆ ।
ದುಗ್ಧಾಬ್ಧಿಶಯನ ವಿಜಯ ವಿಠಲನಂಘ್ರಿ ।
ಹೃದ್ಗಣಿ ನೋಡುವ ದೇವದಾಸಕ್ಕೆ ನಮೊ ೪

## ಆದಿತಾಳ

ಪ್ರತಿ ಪ್ರತಿ ತೀರ್ಥದಲ್ಲಿ ಪ್ರತಿ ಪ್ರತಿ ದಿವಸದಲ್ಲಿ ।
ಪ್ರತಿ ಪ್ರತಿ ಸ್ನಾನಂಗಳು ಮಾಡುವ ಜಲಂಗಳು ।
ಪ್ರತೀಕಾವೆ ನಿಮಗೆಂದು ತಿಳಿದು ಆಮೇಲೆ ಮಿ ।
ಳಿತ ಚತುರ್ಬಗೆ ಗ್ರಹಿಸಿ ಮತ್ತೆ ತೇಜೋಮಯ ।
ಗತಿ ತಪ್ಪದಂತೆ ನೋಡಿ ಆ ತರುವಾಯ ಮ।
ರುತ ದೇವ (ತ) ಸಂದ್ಗತ ಲಕ್ಷ್ಮಿ ನಾರಾಯಣ ।
ಇತರಾಲೋಚನೆ ಸಲ್ಲಾ ದ್ರವರೂಪ ಸರ್ವವೆಂದು ।
ಮತಿಯಿಂದ ತಿಳಿವಂತೆ ಭಕುತಿಯ ಕೊಡುವುದು
ಮಜ್ಜನಾದಿ ಕಾಲಕ್ಕೆ ।
ನುತಿಸುವಿ ಎನ್ನ ಕಲಿಕಲ್ಮಷವ ಕಳೆದು ।
ಹಿತವಾಗಿ ಕಾವುದೆಲ್ಲಾ ಸಾರ್ಥ ತ್ರಿಕೋಟಿ ದೇವ।
ರತಿ ಪತಿ ಪಿತ ನಮ್ಮ ವಿಜಯವಿಠಲರೇಯಾ । ೫

## ಜತೆ

ಎಲ್ಲೆಲ್ಲಿ ಎನ್ನ ಬೆಂಬಲವಾಗಿ ಇದ್ದು ಭೂ ।
ವಲ್ಲಭ ವಿಜಯವಿಠಲನ್ನ ತೋರಿಸುವುದು ೬

## ೨. ಅನಂತಶಯನ

ಅನಂತ ಪರಮ ಪುರುಷ ।
ಅನಂತ ಅವತಾರ ಅನಂತ ಗುಣಾರ್ಣವ ।
ಅನಂತ ಮಹಿಮ ಅನಂತ ಪರದೈವ ।
ಅನಂತಾದ್ಭುತ ಲೀಲಾ ಅನಂತ ಅಪ್ರಮೇಯಾ ।
ಅನಂತ ವರ್ನ ಅನಂತ ವೇದಾ ವಂದ್ಯ ।
ಅನಂತಾಜಾಮರರು ಅನಂತಕಲ್ಪದಲ್ಲಿ ।
ನಿನ್ನಾಂತ ನೋಡಲಾಗಿ ನಿನ್ನಂತ ತಿಳಿಯರೊ ।
ಅನಂತ ಶಯನ ನಿನ್ನಾನಂತ ಬಲ್ಲೆನೆ ।
ಅನಂತ ಶ್ರೀಮದಾ ।
ಅನಂತ ವಿಜಯವಿಠಲ ಪ್ರಸನ್ನವದನಾ ।
ಅನಂತಾನಂತ ಅವಾಂತರರಸೆ ।
ಅನಂತ ಪದುಮನಾಭ ಶ್ರೀ ನಾರಸಿಂಹ ಅನಂತಾನಂತ ೧

### ಮಟ್ಟತಾಳ

ಹರಿಪರ ದೇವತಿಯಾ ನಿರೀಕ್ಷಿಸುವೆನೆಂದು ।
ಪರಮ ಭಕುತಿಯಲ್ಲಿ ಇರತಕ್ಕವನಾಗಿ ।
ಧರಣಿಯೊಳಗೆ ದಿವಾಕರ ಯತಿ ದ್ವಾರಕಾ ।
ಪುರಿಯಲ್ಲಿ ತಪಸಿಗೆ ನೆರೆನಂಬಿದನೆಂದು ।
ಪರ ಚರಿತರಂಗ ವಿಜಯವಿಠಲರೇಯಾ ।
ತ[ರ]ಳನಾಗಿ ಬಂದು ಸರಸದಲಿ ಸುಳಿದ ೨

### ರೂಪಕತಾಳ

ಹರಿ ಸುಳಿಯಲು ದಿವಾಕರಮುನಿ ವೈರಾಗ್ಯ ।
ಮರೆದು ಮರುಳಾಗಿ ಪರಮಾ ಮೋಹದಿಂದ ।
ಕರದು ತೊಡಿಯಲ್ಲಿ ಕುಳ್ಳಿರಿಸಿ ಬೆಸಗೊಳಲು ।
ಹರಿಮಾಯಾ ಕಲ್ಪಿಸೆ ಚರಿತೆಯ ತೋರಿದ ।

ಜರಿದು ಅಲ್ಲಿಂದಲ್ಲಿ ಬರುತ ಬರುತ ಮುನಿಗೆ ।
ಕರ ಪ್ರಾಪ್ತಿಯಾದಂತೆ ಸರಿದು ಬಂದನು ದೂರಾ ।
ಶರಣರ ಕರುಣಾಳು ವಿಜಯವಿಠಲನು ಕಿಂ ।
ಕರನ ಮನೋಭಾವಾ ಅರಿದು ಆ ಕ್ಷಣದಲ್ಲಿ ೩

## ಝಂಪೆತಾಳ

ಗಿಡ ಒಂದು ಮೂರು ಯೋಜನ ಪರಿಮಿತವಿರಲು ।
ಹುಡುಗನಾಗಿದ್ದ ಬಾಹಿರರಂತರಾತ್ಮಕನು ।
ಅಡಗಿದನು ಯತಿಯ ಕಣ್ಣಿಗೆ ಕಾಣಿಸದಿಗಲು ।
ನಡುಗಿದನು ಅಕಟಕಟ ಮನದೊಳಗೆ ।
ಕಡುಪಾಪಿ ನಾನೆಂದು ದಿವಕರನು ಮರುಗಲು ।
ಒಡನೆ ತೋರಿದ ತನ್ನ ನಿಜರೂಪವ ।
ಸಡಗರದ ದೈವ ನಮ್ಮ ವಿಜಯವಿಠಲನಂತಾ ।
ತೊಡೆವನು ನಂಬಿದವರ ಫಣಿಯ ದುರ್ಲೇಖಾ ೪

## ತ್ರಿವಿಡಿತಾಳ

ಬೇರರಿಸಿ ಕಿತ್ತಿ ಬೀಳಲದರ ಪ್ರಮಾಣ ।
ತೋರಿದ ಭಕ್ತನ ಮನಕೆ ಸಂತೋಷ ।
ಮೂರು ಯೋಜನದುದ್ದ ಶ್ರೀ ರಮಣನುದರಾ ।
ಮೂರುತಿಯಾಗಿ ಪವಳಿಸಿದಾನಂದು ವೇಗ ।
ಭಾರತಕರ್ತಾನಂತ ವಿಜಯವಿಠಲರೇಯನ ।
ಆರು ಬಲ್ಲರ್ಯೆಯ್ಯಾ ಕಾರುಣಿಕ ತನ[ವ] ೫

## ಅಟ್ಟತಾಳ

ಬೆರಗಾಗಿ ಮುನಿನಿಂದು ಕರವ ಮುಗಿದು ।
ಶಿರಿಧರನ್ನ ರೂಪವನ್ನೂ ನೋಡಿ ।
ಪರಮಾಶ್ಚರ್ಯವಾನಿರವ ನೋಡುತ ವಿ ।
ಸ್ತರದಿಂದ ಪೊಗಳಿದಾ ।

ಹರಿ ನಿನ್ನ ರೂಪವೀಪರಿಯಲ್ಲಿ ಉಳ್ಳಾರೆ ।
ಧರೆ ಮನುಜರು ನಿನ್ನ ಅರಿವುದೆಂತೆನ್ನಲಾಗಿ ।
ಹರಿ ಅಣೋರಣಿರೂಪ ಕರುಣಾದಿಂದಲಿ ದಿವಾ ।
ಕರನ ಕರದಲಿಂದ ವರದಂಡಾ ಪರಿಮಿತ ।
ಎರಡೊಂದರೊಳಗೆ ಆಕಾರತಂದು ನಿಲಿಸಿದ ।
ನರಸಿಂಹ ವಿಜಯವಿಠಲ ಪದುಮನಾಭಾ ।
ವರ ಅನಂತಾ ಕ್ಷೇತ್ರನಿವಾಸಾ ೬

### ಆದಿತಾಳ

ವರವಿತ್ತು ಒಂದು ಕಲ್ಪಾ ಪರಿಯಂತ ನಿನ್ನಾ ।
ವರಕರದಿಂದರ್ಚನೆಗೊಂಡು ಇಲ್ಲೆ ಎನುತಾ ।
ನಿರುತಾವ ನರನೊಮ್ಮೆ ಕರಣ ಶುದ್ಧಿಯಲ್ಲಿ ।
ಚರಿಸಿ ಯಾತ್ರಿಯ ಎಪ್ಪತ್ತೆರಡು ತೀರಥದಲ್ಲಿ ।
ಪರಮನಿಷ್ಠೆಗೆ ಮನವೆರಗಿ ಯತಾರ್ಥವಾಗಿ ।
ಹರಿಗೆ ಕುಡಿತೆಜಲವೆಂದು ಬಚ್ಚಿಡಲಾಗಿ ।
ಪರಮ ಪದವಿಗಲ್ಲಿ ನೆರವಾಗಿ ಉಣಿಸೋದು ।
ಪರಮಪಾವನನಂತ ವಿಜಯವಿಠಲ ಬಲ್ಲ ।
ಧರೆಯೊಳೀಕ್ಷೇತ್ರಕ್ಕೆ ಸರಿಗಾಣೆ ಎಣಿಸಾಲು ೭

### ಜತೆ

ಪದುಮನಾಭಾನಂತಾ ನರಸಿಂಹ ವೈಕುಂಠ ।
ಸದ್ಮನೆ ವಿಜಯವಿಠಲದಾಸರ ಪ್ರೇಮಾ ೮

## ೩. ಅನಂತಶಯನ

### ಧ್ರುವತಾಳ

ಕೇಶವ ಕೃಷ್ಣ ತ್ರಿಲೋಕೇಶ ಕೈಟಭಾರಿ ।
ಸಾಸಿರಫಣಾವುಳ್ಳ ಶೇಷ ಶಯನಾ ।

ಕ್ಲೇಶನಾಶನಾ ನರಕೇಸರಿ ವೇಷಾನೆ ।
ಮೀಸಲಾಭರಣಾ ವಿಭೂಷಣ ಸರ್ವಹ ।
ಶ್ರೀ ಸತಿ ಉರದಲ್ಲಿ ವಾಸವಾಗಿ ನಿತ್ಯ ।
ತಾ ಸೇವಿಸುವಳು ಸಂತೋಷಾಬ್ಧಿಯೊಳು ಮುಳುಗಿ ।
ಪೂಸಿದಾ ಶ್ರೀಗಂಧ ವಾಸನಿಯಾ ಕಮ ।
ಲಾಸನ ಜಪಿಸಿ ಎಣಿಸುವವನನುದಿನ ।
ಈ ಸುಖವಿನ್ನಾವ ದೇಶ ದೈವಂಗಳಲ್ಲಿ ।
ಏಸೇಸು ಪರಿಯು ನಿಕ್ಷಿಸಲು ಕಾಣೆನೋ ।
ಈಶಾದ್ಯಾರೊಡಿಯಾದಿ ಕೇಶಿಖಳಮರ್ದನಾ ।
ಶ್ರೀಶಾ ವಿಜಯವಿಠಲಾ ಸುಲಭಾ ಆದಿ ।
ಕೇಶವಾ ತಾಮ್ರಪರ್ಣಿವಾಸ ಲೋಕೇಶಾ ೦

## ಮಟ್ಟತಾಳ

ಚತುರಾನನ[ನ] ಭಜಿಸಿ ಅತಿದುರುಳಾ ಕೇಸಿ ।
ಸತತ ತಪಸಿಯಾಗಿ ಮಿತಿ ಇಲ್ಲದ ದಿವಸ ।
ಅತಿಶಯದಲಿ ವರವ ಇತರಾದಿಗಳಿಂದ ।
ಹತವಾಗದಂತೆ ನುತಿಸಿ ಬೇಡಿಕೊಂಡ ।
ಕ್ಷಿತಿಯೊಳಗೆ ದಿನ ಪ್ರತಿದಿನದಲಿ ಸುರರ ।
ಖತಿಗೊಳಿಸಿದನುನ್ನತ ಬಲು ಗರ್ವದಲಿ ।
ಪತಿತಪಾವನನಾದ ವಿಜಯವಿಠಲನ್ನ ಭ
ಕುತ ಜನರಿಗೆ ಅಹಿತನಾಗಿ ಮೆರವುತಿರೆ ೨

## ರೂಪಕತಾಳ

ಆದಿಕೇಶಾನೆಂಬ ದೈತ್ಯಾನ ಉಪಹತಿಗೆ ।
[ಅ] ದೈತ್ಯರು ಬಳಲಿ ಬಲು ಬಗೆಯಿಂದಲಿ ।
ಆ ದೈತ್ಯನುಪಟಳ ತಾಳಾಲಾರೆವು ಎಂದು ।
ವೇದಗಳಿಂದಲೀ ವೇಧಾಗೆ ಮೊರೆ ಇಡಲು ।
ಆದರಿಸಿ ತನ್ನಿಂದೂದೆ ಮೊದಲಿಗೇ ।

ಕ್ರೋಧರಿಗೆ ವರವಿತ್ತದಪರಾಧಾವೆನ್ನದು ಎಂದು ।
ಕಾದುವರಿದೂ ಮಿಕ್ಕಾದವರಿಗೆನುತಾ ।
ಶ್ರೀದೇವಿ ಅರಸನ್ನಾ ಪಾದದಲ್ಲಿಗೆ ಸಾರಿ ।
ಖೇದಿಗನು ಮಹೇಂದ್ರಾ ಪ್ರದೇಶಾದಲ್ಲಿದ್ದು ।
ಬಾಧಿಯಾ ಬಡಿಸುವದು ವಿಧಿ ತಾ ಬಿನ್ನೈಸೆ ।
ಮೇಧಿನಿಪತಿ ಮಿಜಯವಿಠಲಾದಿ ಕೇಶವಾ ।
ತಾದಯಾದಿಂದಲಜಾದಿಯಾ ಕಳುಹೀ ೩

### ಝುಂಪೆತಾಳ

ಅಸುರನಿದ್ದೆಡೆಯಲ್ಲಿ ಒಮ್ಮಿಂದೊಮ್ಮೆಲೇ ರ ।
ಕ್ಕಸರ ರಿಪು ಎದುರಾಗಿ ಬಂದು ನಿಂದ ।
ಬಿಸಜಸಂಭವನ ರೋಮಾದಿಂದ ಜನಿಸಿದ ।
ಅಸಮ ನೀನಹಮೆನುತ ಅವನ ಪಿಡಿದೂ ।
ಕುಶಿಯನುಗೊತ್ತಿ ಏಳದಂತೆ ಮಲಗಿಸಿ ।
ಅಸುರಾರಿ ಖಳನ ಮೈಮೇಲೆ ಪವಡಿಸಿದ ।
ನಿಶಾಚರಾ ಸಾಯದಂತುಪಾಯವನು ಕ ।
ಲ್ಪಿಸಿದ ಹರಿಮಹಿಮಿಗೆ ಏನೆಂಬೆನೋ ।
ಕುಸುಮಶರನಯ್ಯನೆ ವಿಜಯವಿಠಲನ ತು ।
ತಿಸುತ್ತಿರಲಿತ್ತ ಅಸುರನ ಮಡದಿ ಮುನಿದೂ ೪

### ತ್ರಿವಿಡಿತಾಳ

ತನ್ನ ಗಂಡನ ಮೇಲೆ ಪನ್ನಗಶಯನನನ್ನು ।
ಸಣ್ಣವನ ತೆರದಿನ್ನೂ ಮಲಗಿರೆ ।
ಮುನ್ನೆ ಕೋಪವ ತಾಳಿ ಭಿನ್ನಾಮಾಳಿಪೆನಿವ ।
ರನ್ನು ಬಿಡಿಸಿ ಎಂದು ಪುಣ್ಯ ಗಂಗಿಯಾ [ಬರ] ।
ವನ್ನು ಹಾರೈಸಾಲು ತನ್ನಿಂದಾದಾ ಸೇವೆ ।
ಯನ್ನು ಮುಟ್ಟಿಪೆನೆಂದು ಘನ್ನಾತೀವರ ತಾವ್ರು ।
ಪರ್ನಿಯಾ ಒಡಗೊಂಡು ಬಿನ್ನಾಣಾದಲಿ ಭೋ ।

ರನ್ನೆ ಪರಿದು ಬಂದಳಾನಂತನ ನೋಡಿ ।
ಸನ್ಮನಾದಿಂದಲಾ ತನ್ನ ಸುತ್ತಲು ಗಂಗೆ ।
ರನ್ನದ ವನಮಾಲೆಯನ್ನು ಆದಳು ಸುರರೂ ।
ಬಣ್ಣಿಸಿ ಪೊಗಳಾಲು ಕಣ್ಣೆವೆ ಇಡದಲೆ ।
ಅನಂತ ಶಯನ್ನಾ ವಿಜಯವಿಠಲದೇವಾ ।
ಗ್ರಣ್ಯನ ಲೀಲೆಗೆ ಅನಂತಾ ನಮೊ ನಮೊ ೫

### ಅಟ್ಟತಾಳ

ಅಂದು ಪ್ರಭಾಕರಾ ಬಂಧುವಿನ ನಿಜಾ ।
ನಂದನ ಗರುಡ ಪುರಂದರ ಉಳಿದಾದ ।
ವೃಂದಾರರ ಬಲ ಒಂದಾಗಿ ಎದಿರಿಲಿ ।
ಬಂದು ಜಯ ಜಯವೆಂದು ಪೇಳುತಲಿರೆ ।
ನಿಂದವರ[ನು] ದಯದಿಂದಲಿ ನೋಡಿ ಮು ।
ಕುಂದನು ವರಗಳ ಕುಂದಾದೆ ಬೇಡೆನೆ ।
ಸಂದೇಹ ತೊರದು ಕಾಯೆಂದು ಶಿರಬಾಗಿ ।
ಇಂದೀಖಳನ ಮ್ಯಾಲೆ ಬಂದು ನೀನು ನಾ ।
ಗೇಂದ್ರ ಸಹಿತಾಲಿದ್ದಂದಾದಿ ಪವಳಿಸಿ ।
ಒಂದು ಕಲ್ಪವಿರು ಎಂದು ಪ್ರಾರ್ಥನೆ ಮಾಡಿ ।
ನ್ನೊಂದು ವರವಕೊಡು ಮಂದಮತಿಗಳಿಗೆ ।
ಸಂದರುಶನದಿಂದ ಪೊಂದಲಿ ಕೈವಲ್ಯಾ ।
ಇಂದು ವಂದಿತ ಪಾದಾ ವಿಜಯವಿಠಲ ನೀನೆ ।
ಒಂದೆ ದೈವ ಜಗತ್ತಂದೆ ಕೃಪಾಸಿಂಧೂ ೬

### ಆದಿತಾಳ

ತುತಿಸಾಲು ತೃಪ್ತನಾಗಿ ಚತುರ ಮೊಗಾದಿಗಳ ।
ಅತಿವೇಗದಿಂದ ನೋಡುತಲಿ ನೀವಂದತೆರದೀ ।
ಹಿತವಾಗುವದದಕ್ಕೆ ಪ್ರತಿಕೂಲಾವಿಲ್ಲಾವೆಂದು ।
ಪಿತಾಮಹನಯ್ಯಾ ನಗುತ ಭರವಸವಿತ್ತಾ ।

ಕ್ಷಿತಿಯೊಳಗಾವಾನಾರ ಮತಿವಂತನಾಗಿ ಬಂದು ।
ಸಿತ ಮನದಲಿ ಯಾತ್ರಿ ಮಿತಿ ತಪ್ಪದಂತೆ ಮಾಡಿ ।
ಸಿತ ನದಿ ತಾಮ್ರಪರ್ನಿ ಜತೆಯಲ್ಲಿ ಸ್ನಾನಗೈದು ।
ಚತುರನಾದವಗೆ ಶಾಶ್ವತವೆನ್ನಿ ಮೇಲುಲೋಕ ।
ಪ್ರಥಮಾಂಗನೊಡಿಯಾ ವಿಜಯವಿಠಲನಂತಾ ।
ಪ್ರೀತವೆಂದು ಮಾಡಿ ಕುಲಸಹಿತಗತಿಗೆ ಪೊಂದುವದು ೭

### ಜತೆ

ಆದಿಕೇಶವಕ್ಷೇತ್ರದಲ್ಲಿ ಒಂದು ರಾತ್ರಿ ।
ಸಾಧು ಇರಲು ಒಲಿವ ವಿಜಯವಿಠಲನಂತಾ ೮

## ೪. ಅನಂತಶಯನ

### ಧ್ರುವತಾಳ

ಮಲಯಾ ಮಧ್ಯದಲ್ಲಿಪ್ಪುದೇನೊ ಪಾವಿನ ಮೇಲೆ
ಮಲಗಿ ಮುದದಿಂದ ನಸುನಗುವದೇನೊ ।
ಪೊಳೆವ ವೈಕುಂಠಾದಿ ಹೊಳಲಾ ತೊರದು ಈ ।
ನೆಲದಲ್ಲಿ ವಾಸವಾಗಿಪ್ಪದೇನೊ ।
ವಲಯಾಕಾರದ ಜಂಬುದ್ವೀಪದೊಳಗೆ ಉತ್ತುಮ ।
ನಿಲಯಾ ನೋಡಿಕೊಳದೆ ಬಂದಾಬಗಿ ಏನೋ ।
ಜಲಜ ಸಂಭವಾದ್ಯರು ಒಲಿದು ಪೂಜಿಸುತಿರಲು ।
ಇಳೆಯೊಳೀ ನರರಿಂದ ಪೂಜೆಗೊಂಬುವುದೇನೊ ।
ಸುಲಭ ಸಾಧ್ಯ ವಿಜಯವಿಠಲ ಭೋಗಾನಂತ ।
ಚಲುವ ದೇವರದೇವ ಒಲಿದವರಿಗೆ ।
ಗಲಭೆ ಮಲಿಯಾ ಮಧ್ಯವಿಪ್ಪದೇನೊ ೧

### ಮಟ್ಟತಾಳ

ಎವೆ ಇಡದಲೆ ನಿನ್ನಾ ನೋಡುವ ಭಾಗ್ಯ ।
ಅವನಿಯೊಳಗೆ ನಿನ್ನಾ ನೋಡುವ ಭಾಗ್ಯ ।

ಯಾವತ್ತು ನಿನ್ನಾ ನೋಡುವ ಭಾಗ್ಯ ।
ಅವಯವಂಗಳು ಇಂದು ನೋಡುವ ಭಾಗ್ಯ ।
ದಿವಿಜಾದಿಗಳಿಗೆ ಮನಕೆ ದೂರ ।
ಭವ ಮನುಜಾ ನಿನ್ನಾ ನೋಡುವ ಭಾಗ್ಯ ।
[ಪವಣ]ವಾದದು ಪಾವನಕಾಯ ।
ನವಮೋಹನ ವಿಜಯವಿಠಲಾನಂತ ।
ಕವಿಗಳ ಮನೋಹರಾ ಭವಭಯವಿದೂರ ।
ದಿವಾಕರ ವರದ ದಿವಾಕರಕುಲಜಾತ ೨

## ತ್ರಿವಿಡಿತಾಳ

ಒಂದು ಬಾಗಿಲಲ್ಲಿ ಆನಂದವಾದಾ ಪಾದಾ ।
ದ್ವಂದರವಿಂದವಾ ಬಿರುದಿನಾ ಪೆಂಡೆಯಾ ।
ಅಂದಿಗೆ ಪೊಂಗೆಜ್ಜೆ ಪರಡು ಬೆರಳಾ ಮುದ್ರೆ ।
ಇಂದು ಲಜ್ಜಿತನಾದ ಚಂಧಾ ಪಾದದ ಉಗುರು ।
ಮಂದಾಕಿನಿಯ ಪಡದಾ ಉಂಗುಟಾಗ್ರ ಜಂಘೆ ।
ಪೊಂದಿ ಪೊಳವಾಜಾನು ವಸನಪಾಟಿಸಿ ನೋಡುವ ।
ಇಂದಿರೆಯರಸಿ ಪಾದಾರ್ಚನೆ ಮಾಡುತ್ತ ।
ಒಂದೊಂದು ಪರಿಯಲ್ಲಿ ಎಣಿಸಿ ಗುಣಿಸುತಿರೆ ।
ಇಂದಾನಂತತಲ್ಪ ವಿಜಯವಿಠಲರೇಯನ ।
ಸಂದರುಶನವಾಗಿ ಇಂದು ಈ ಪರಿ ಕಂಡೆ ೩

## ಮಟ್ಟತಾಳ

ಮಧ್ಯಬಾಗಿಲಲನಿರುದ್ಧನ್ನ ನಾಭಿಯ ।
ಪದ್ಮವನ್ನು ಕಟಿ ತಿದ್ದಿದ ಉಡಿದಾರ ।
ಮುದ್ದು ತ್ರಿವಳಿ ಹೇಮಾ ಅದ್ದಿದ ಶರಗು, ಪ್ರ ।
ಸಿದ್ಧ ಉದರ[ವ]ಕ್ಷಶುದ್ಧ ಕೌಸ್ತುಭಮಣಿ ।
ಪದ್ಧತಿ ಸು[ರುಚಿ]ರ ಪದ್ಮವನ್ನು ಪಿಡಿ ।
ದಿದ್ದು ಮನದಲ್ಲಿ ಇದ್ದವನಾ ಕಂಡೆ ।

ಉದ್ಧಂಡ ವಿಜಯವಿಠಲ ಭೋಗಾನಂತ ।
ಉದ್ಧಾರಮಾಳ್ಪ ಕ್ಷೀರಾಬ್ಧಿಶಯನನೀತಾ ೪

### ಆದಿತಾಳ

ಎರಡೊಂದನೆ ದ್ವಾರದಲ್ಲಿ ಶಿರಸಾಪೊಳವ ಮುಕುಟಾ ।
ಸರಸಕುಂಡಲ ಕರ್ನಧರ ವಕ್ತ್ರನಾಸರಿದ ಪೂ ।
ಸರಸಿಜನಯನ ಕಸ್ತುರಿನಾಮ ಫಣೆಯಲ್ಲಿ ।
ವರಪುಬ್ಬು ಮತ್ತೆ ಒಂದು ಕರವು ಶೃಂಗಾರದಿಂದ ।
ಪರಿಶೋಭಿಸಲು ಈ ಪರಿಯಲ್ಲೀ ।
ಉರಗನ್ನ ಪರಿಯಂಕದಲ್ಲಿ ಮಲಾ ।
ಗಿರುತಿಪ್ಪ ಪರಮಾತ್ಮ ಸಿರಿಯರಸಾ ವಿಜಯವಿಠಲ ।
ಪರಮಭೋಗಾನಂತ ಪರಮರೂಪಶಾಂತ ೫

### ಜತೆ

ಪೊಕ್ಕಳಿಂದಲಿ ಮಗನಾ ಪೆತ್ತ ಪದುಮನಾಭಾ ।
ರಕ್ಕಸರಿಪು ವಿಜಯವಿಠಲಾ ಭೋಗಾನಂತಾ ೬

## ೫. ಅನಂತಶಯನ

### ಧ್ರುವತಾಳ

ಶ್ರೀಮದನಂತಾ ಶ್ರೀ ಲಕುಮಿಕಾಂತಾ ಆ ।
ದಿ ಮ[ಧ್ಯಾಂ]ತರಹಿತ ಪರಮಕಾಂತ ।
ತಾಮಸ ಖಳಹಂತ ಸರ್ವರಿಗೆ ಬಲವಂತ ।
ರೋಮ ರೋಮ ಗುಣವಂತ ಬಲು ನಿಶ್ಚಿಂತ ।
ನಾಮ ಪೊಗಳುವಂಥ ಜನರಿಗೆ ದಯವಂತ ।
ಕಾಮಜನಕ ಅನಂತ ತಲ್ಪಾನಂತ ನಾಮಾ ।
ಆದಿ ಅನಂತ ವಿಜಯವಿಠಲ ಸಂತ ।
ತಮನ್ನಿಸುವಂತ ರಂಗ ನಿ[ಶ್ಯಾಂ]ತ ೧

### ಮಟ್ಟತಾಳ

ಜಯ ಜಯ ಜಯದೇವಾ ಜಯ ಜಯ ಸಂಜೀವಾ ।
ಜಯ ಜಯ ಶ್ರೀಧವ ಜಯ ಭಕ್ತರಕಾವ ।
ಜಯ ಅಘವನದಾವ ಜಯ ವರಗಳ ನೀವ ।
ಜಯ ಭುವನ ಜೀವ ಜಯಗೋಕುಲ ಗೋವ ।
ಜಯ ಜಯ ಜಯ ವಿಜಯವಿಠಲದೇವ ।
ಜಯ ಜಯ ಅನಂತ ಜಯ ಜಯ ಧನಂ ।
ಜಯ ನಾಗ್ರಜ ಪ್ರೀಯಾ ಜಯ ಜಯ ಮುನಿಗೇಯಾ ೨

### ತ್ರಿವಿಡಿತಾಳ

ಕ್ಷೀರವಾರಿಧಿಶಯನಾ ನೀರಜದಳನಯನಾ ।
ಕಾರುಣ್ಯ ಮೂರುತಿ ಮೆರವ ಸತ್ಕೀರೂತಿ ।
ವಾರುಣಭಯಹಾರ ವಾರುಣಸಂಹಾರ ।
ಕಾರಣ ಪುರುಷಾ ಭವತಾರಣ ಬಲುದೈವಾ ।
ಚಾರು ನವನೀತ ಚೋರ, ನಾರಿಯರ ಜಾರಾ ।
ವಾರವಾರಕ್ಕೆ ಕೃಪಾಪಾರಾವಾರವೆನಿಪ ।
[ಪಾ]ರಾಮಹಿಮ ಗುಣವಾರಿಧಿ ನಿರ್ಗುಣ ।
ಕಾರಾ ಶ್ರೀಮದಾನಂತಾ ತೋರುವಾನಿಜಾನಂತಾ ।
ಸಾರಾ ವಿಜಯವಿಠಲಾ ದೂರಿದವರ ಕುಟಲಾ ।
ಹಾರಿಸುವಾ ಕರುಣಿಸುರರ ಮಸ್ತಕ ಮಣಿ ೩

### ಅಟ್ಟತಾಳ

ವೃದ್ಧ ಭೂಸುರನಾಗಿ ಕೌಂಡಿಣ್ಯ ಮುನಿಪನ್ನ
ಶ್ರದ್ಧರ ಸಕೆ ಒಲಿದ ಸಿದ್ಧ ಪ್ರಸಿದ್ಧ ।
ಶುದ್ಧಾತ್ಮರು ಬಂದು ಯಾತ್ರಿಯಾ ಮಾಡಾಲು ।
ಬಿದ್ದು ಹೋಹದ ಫಲಗಳನ್ನು ಇತ್ತು ।
ಉದ್ಧಾರಗೈಸುವ ಉದಧಿ ಮಥನಸಿರಿ ।

ಮುದ್ದುರಮಣ ಶ್ರೀಮದನಂತರೂಪ ।
ಇದ್ದಲ್ಲಿ ಫಲವೀವ ವಿಜಯವಿಠಲ ಬಂದು ।
ಸದ್ಭಾವದಲ್ಲಿರೆ ಭದ್ರವಾಗುವುದೂ ೪

### ಆದಿತಾಳ

ಜ್ಞಾನಾವಂತಾ ಗುಣನಂತಾ ।
ಧ್ಯಾನಾನಂತಾ ದಾನಾನಂತಾ ।
ಮಾನಾನಂತ ಮೌನಾನಂತಾ ।
ಅನಂತಾನಂತಾನಂತಾ ।
ಅನಂತವರ್ನ ವಿಜಯವಿಠಲಾ ।
ಅನಂತ ಎನ್ನ ಪ್ರಾಣಾನಂತಾ ೫

### ಜತೆ

ನಮೊ ನಮೊ ಅನಂತಾ ಆದಿ ಅನಂತಾ ನಿ ।
ಗಮಪಾಲಾ ವಿಜಯವಿಠಲನಂತ ಸ್ವಾಮಿ ೬

## ೬. ಅನಂತಶಯನ

### ಧ್ರುವತಾಳ

ವ್ರತವೆ ಉತ್ತಮ ವ್ರತವು ಕ್ಷಿತಿಯೊಳಗೆ ನೋಡಲು ।
ಮತಿವಂತರಿಗೆ ಮುಕ್ತಿ ಪಥಕೆ ಮೊದಲೂ ।
ಲತೆ ಪಲ್ಲವಿಸಿದಂತೆ ಸತತದಲ್ಲಿ ಭಕ್ತಿ ।
ಪ್ರತಿದಿನ ವೆಚ್ಚುವದು ಅತಿಶಯದಲ್ಲಿ ।
ಖತಿಗೊಳದಿರಿ ಶಾಶ್ವತವೆನ್ನಿರೋ ಜನರೂ ।
ಪತಿತರಾಗದೆ ಸಮ್ಮತ ಬಡುವದೂ ।
ಶತಕೋಟಿ ಅನ್ಯದೇವತಿಗಳ ವ್ರತಮಾಡೆ ।
ಹತವಾಗುವದು ಸುಕೃತವಿದ್ದದ್ದೂ ।
ಚತುರ ಮೂರುತಿ ನಮ್ಮ ವಿಜಯವಿಠಲನಂತಾ ।
ವ್ರತ ಕಾವುದು ಎಲ್ಲಿ ಪ್ರತಿಗಾಣೆ ಶ್ರುತಿಯೊಳು ೧

### ಮಟ್ಟತಾಳ

ಸುಮಂತ ಭೂಸುರನಾ ಕುಮಾರಿ ಸುಶೀಲೆ ।
ವಿಮಲಾ ಗುಣವಂತೆ ಶಮೆದಮೆಯಲ್ಲಿರಲು ।
ಸುಮಂತ ವಿಪ್ರಾ ಉತ್ತುಮ ಕೌಂಡಣ್ಯಗೆ ।
ಸುಮತಿಯಳಾನಿತ್ತಾ ಸುಮನಸರು ಮೆಚ್ಚೆ ।
ರಮೆಯರಸ ನಮ್ಮ ವಿಜಯವಿಠಲನ್ನಾ ।
ತುಮದೊಳಗೆ ನೆನೆದು ಯಮುನಾ ತೀರಕೆ ಬರಲೂ ೨

### ರೂಪಕತಾಳ

ಮೌನಿ ಕೌಂಡಿಣ್ಯನು ಮಧ್ಯಾನದಾ ಆನ್ಹಿಕೆಯನು ।
ಪ್ರಣವ ಪೂರ್ವದಿಂದಾರ್ಚನೆ ಮಾಡ ಪೋದಾ ಯ ।
ಮುನ ನದಿ ಸಲಿಲಿಗೆ ಘನತೀವರದಿಂದ ।
ವ[ನಿ]ತೆ ಸುಶೀಲಿತಾ ವನಜಾಕ್ಷಿಯರು ವ್ರತಾ ।
ವನು ಮಾಡುತಿರೆ ಆ ಕ್ಷಣದಿಂದ ಗಮನಿಸೀ ।
ಎನಗೆ ಪೇಳೆಂದವರನನುಸರಿಸಿ ಕೇಳಲೂ ।
ಸನುಮತ ಅನಂತನ ವ್ರತವೆಂದೆನಲೂ ।
ವಿನಯದಿಂದ ನಮಿಸಿ ಮನದಿಚ್ಛೆಲಿ ನೋಂಪಿ ।
ಏನುನೋ ತಾಳದಾನಂತನ ಸೂತ್ರ ತೋಳಿಲಿ ।
ದಿನ ಭದ್ರಪದ ಶೋಭನ ಶುಕ್ಲ ಚತರ್ದಶಿ ।
ದಿನದಲ್ಲಿ ವಾಮಲೋಚನೆ ಕಟ್ಟಿದಳೊಲಿದೂ ।
ಪ್ರಣುತಾರ್ಥಹರ ನಮ್ಮ ವಿಜಯವಿಠಲನ್ನ ।
ನೆನದು ಪತಿಯಾ ಕೂಡಿ ಮನೆಗೆ ಬರುತೀರೆ ೩

### ಝಂಪೆತಾಳ

ವಾರಿಯೊಳಗೆ ಮದವಾರುಣಾ [ಶ್ವಧ್ವನಾ] ಶ್ಯಂದನಾ ।
ವಾರುಗಂಗಳು ಪರಿವಾರಾವೊಪ್ಪುತಲಿರೇ ।
ಸಾರರತುನಾ ಬಂಗಾರಮಯದಾ ಶ್ಯಂ ।

ಗಾರದಾ ಮಂದಿರಾ ತೋರುತಿರಲು ಮನಕೆ
ಕಾರುಣಿಕವು ಮುಂದೆ ನಾರಿಯೊಡನೆ ಮುನಿ ।
ವರೇಣ್ಯ ತನ್ನಯಾ ಕುಟೀರಕ್ಕೆ ಬರಲಾಗಿ ।
ಕಾರಣಾ ಪುರುಷಶಿರಿ ವಿಜಯವಿಠಲನ್ನಾ ।
ದೋರದಾ ಮಹಿಮೇಲಿ ಪೂರೈಸಿತು ಭಾಗ್ಯಾ ೪

## ತ್ರಿವಿಡಿತಾಳ

ಎತ್ತ ನೋಡಿದರತ್ತ ತತ್ತುಳಕಲು ಭಾಗ್ಯ ।
ನಿತ್ಯಸಂದಣಿಯಿಂದ ಇತ್ತಮುನಿ ಇರುತಿರೆ ।
ಚಿತ್ತದೊಲ್ಲಭ ಕರದಿ ಸೂತ್ರವಿರಲೂ ಮುನಿ ।
ಪೋತ್ತಮಾ ನುಡಿಸಿ ಅದರುತ್ತರವ ತಿಳಿದು ।
ಎತ್ತಣ ವ್ರತವೆಂದು ಮಿತ್ರಿಯಜರದು ಮೋರಾ ।
ಕಿತ್ತು ಬಿಸುಟನಾಗಾ ಪಿತ್ತದೊಳಗೆ ತೆಗೆದು ।
ಉತ್ತಮಗುಣವಂತೆ ಎತ್ತಿ ಮನದಿ ಹಾ, ಯೆ ।
ನುತ್ತ ಪಾಲಿನೊಳದ್ದಿ ತುತಿಸಿ ಗತಿ ಹರಿಯೆ ।
ನುತ್ತ ಜತನ ಮಾಡಿ ಚಿತ್ತಜಾಪಿತ ।
ನಂತ, ವಿಜಯವಿಠಲರೇಯಗೆ ।
ಹತ್ತದವನಾಗಿ ಮುನಿ ಪೊತ್ತಾ ಕ್ಲೇಶದೊಳಾದ ೫

## ಅಟ್ಟತಾಳ

ಬಡತನ ಬಂದು ಬೆಂಬಿಡದಲೆ ಕಾಡಲು ।
ಒಡನೆ ಬಿದ್ದವರೆಲ್ಲಾ ಬ[ಡಿ]ದರು ಪಗೆಯಾಗಿ ।
ಪಿಡದಾ ಪರಿಚಾರಾ ಕಿಡಿಗೆಡಿಗೆ ಮುನಿ ।
ದಡಿಗಡಿಗೆ ಬೈದೊಡಂಬಡದಿಪ್ಪಾರು ।
ಕಡುನೊಂದು ಯತಿ ತನ್ನ ಮಡದಿ ವಿನಯದಿಂದಾ ।
ನುಡಿವ ಮಾತನು ತನ್ನೊಡಲೊಳು ಚಿಂತಿಸಿ ।
ಸುಡು ಎನ್ನ ಶರೀರ ಬಿಡುವೆ ರಂಗನ ದಿವ್ಯಾ ।
ಅಡಿಗಳ ಬಳಿಯಲ್ಲಿ ತಡಿಯದಲೆ ಪೋಗಿ ।

ಕೊಡವೆನೆನುತ ನೀರು ಕುಡಿಯದೆ ಪೊರಮಟ್ಟಾ ।
ಅಡವಿ ಗಿಡಗಳು ಪಿಡಿದು ಕ್ಲೇಶದಿಂದ ।
ಮಿಡಕುತಾಳಲ್ಲಿ ಕಾಲೊಡದು ನೆತ್ತರಧಾರಿ ।
ಇಡುತಲಿ ಬಲುದೂರಾ ಹುಡುಕುತಾ ಮಹೇಂದ್ರ ।
ದಡಿಗೆ ಬಂದನು ಋಷಿ ।
ಕಡು ಕೃಪಾಸಾಗರಾ ನಮ್ಮ ವಿಜಯವಿಠಲನಂತಾ ।
ತಡಿಯ ಕೌಂಡಣ್ಯನು ನಡುಗಿ ಬಾಯಾರಿ ೬

**ಆದಿತಾಳ**

ಬರುತಾ ಚೂತಾ ತರುವು ಸರೋ ।
ವರಾವೆರಡು ಗೋ ವೃಷಭಾ ।
ಖರ ಮದಕುಂಜರಗಳನು ।
ನಿರೀಕ್ಷಿಸಿ ಅನಂತನಾ । ಕುರುಹನಾ[ನೀ]ವುತೋ ।
ರಿರಿ ಎಂದು ಬೆಸಗೊಳಲು । ಅರಿಯಲಿಲ್ಲಂದು ಉ ।
ತ್ತರ ನೆರದಾವು ಕೊಡಲು । ಪರಮ ಮೂರ್ಛಿತನಾಗಿ ।
ಒರಗಿದ ಧರಿಗೆ ಮುನಿ । ಹರಿ ಅರಿದು ವೃದ್ಧ ಭೂ ।
ಸುರನಾಗಿ ಬಂದು ವಿ । ವರಿಸಿ ತಿಳಿದು ತಡ ।
ವರಿಸಿ ಕಿಂಕರ ನೋಡಿರದೆ ಬೆಂಬಲವಾಗಿ ।
ಕರತಂದು ತನ್ನ ನಿಜ । ಸ್ವರೂಪವಾ ತೋರಿ ಮುನಿಯಾ ।
ಪರಿಶ್ರಮ ಪರಿಹರಿಸಿ ಕರುಣವ ಮಾಡಿದನು ।
ಸುರರಿಗಸಾಧ್ಯವು । ಮರಿಯದೆ ಪದಿನಾಲ್ಕೋ ।
ತ್ಸರಾನಂತನಾ ವ್ರತ । ಚರಿಸಿ ಸುಖದಿ ಬಂದು ।
ವರ ಪುನರ್ವಸು ಸ್ಥಾನಾ । ಇರ ಹೇಳಿ ಹಿಂದೆ ಕಂಡಾ ।
ದರ ಶಂಕೆಯನು ಪೇಳಿ । ಹರಿ ಅಂತರ್ಧಾನನಾದಾ ।
ತಿರುಗಿ ಕೌಂಡಣ್ಯ ಮುನೀಶ್ವರಾ ಅಕ್ಲೇಶದಲ್ಲಿ ।
[ಕ]ರುಣಿ ಜ್ಞಾನವಾ ನೆನದು ಹರಿಯಾ ಕೊಂಡಾಡುತ್ತಾ ।
ಭರದಿಂದ ತನ್ನ ಮಂದಿರಕೈತಂದು ವ್ರತವ ।
ಚರಿಸಿದ ಮನಃ ಪೂರ್ವದರ ಭಕುತಿ ತಪ್ಪದಲೇ ।

ಸರಿ ಇಲ್ಲಾದೈಶ್ವರ್ಯ ಪರಿಪೂರ್ಣವಾಗಿ ಬಾಳಿ ।
ಮರಳೆ ಸೇರಿದ ತನ್ನವರ ಸ್ಥಾನದಲಿ ಪೋಗಿ ।
ಶಿರಿ ಶ್ರೀಮದನಂತ ವಿಜಯವಿಠಲರೇಯಾ ।
ಸ್ಥಿರವಾದಾನಂದು ಮೊದಲು । ಶರಧಿ ದಕ್ಷಿಣಾದಲ್ಲಿ ೭

**ಜತೆ**

ಯಮ ಸುತನ ನೋತು ಬಲು ಶ್ರಮದಿಂದ ದೂರಾದ
ತಮರಿಗೆ ಸಲ್ಲಾದಿದು ವಿಜಯವಿಠಲ ಬಲ್ಲಾ ೮

## ೭. ಅರುಣಾಚಲ

**ಧ್ರುವತಾಳ**

ಅರುಣಾಚಲೇಶ್ವರಾ ಕರುಣವ ಮಾಡಯ್ಯ ।
ಹರಣಾ ನಿನ್ನದು ನಾಗಾಭರಣ ದೇವ ।
ತರುಣ ಭಕುತಿಯಲ್ಲಿ ಶರಣು ಪೋಗುವೆ ನಿನಗೆ ।
ಮರಣ ಕಾಲಕ್ಕೆ ದೈತ್ಯಾಹರಣ ಹರಿಯಾ ।
ಚರಣ ಯುಗಳ ದಿವ್ಯ ಸ್ಮರಣೆ ಒದಗುವಂತೆ ।
ಕರಣ ಶುದ್ಧಿಯಲ್ಲಿ ಉದ್ಧರಣ ಮಾಡೋ ।
ಧರಣಿ ಧರಾ ನಮ್ಮ ವಿಜಯವಿಠಲ ಶ್ರೀ ।
ಚರಣಾ ಮನದಲ್ಲಿಟ್ಟು ಅರುಣ ಕರ್ಪದಾ ೧

**ಮಟ್ಟತಾಳ**

ಏಳು ಯೋಜನ ಉದ್ದ ಶೈಲವಿಪ್ಪುದು ಕಾಣೊ ।
ಏಳು ಯೋಜನ ಸುತ್ತಾ ಲೋಲ ಪುಣ್ಯಭೂಮಿ ।
ಭೂಲೋಕದ ಒಳಗೆ ಕೇಳಿರಿ ಇದಕ್ಕೆಲ್ಲ ।
ಮೇಲಾದ ಯಾತ್ರಿ ಪೇಳುವರಾರಯ್ಯಾ ।
ಏಳುವಾಸರವಿದ್ದ ಆಳುಗಳ ಪುಣ್ಯ ।
ಪೇಳಲಿ ಎನ್ನಳವೆ ಏಳೇಳು ಜನ್ಮಕ್ಕೆ ।

ಪದದರುಶನ ಮತ್ತೆ ಭವನಾಶಿ ಮಜ್ಜನ ।
ಬುಧನು ಬಿಡದೆ ಬಂದು ಗುಹಾದಿಂದ ।
ಉದಯಕಾಲಕೆ ಪೋಗಿ ಬಲಗೊಂಡು ಬರುವಾ ಪ್ರಾಂ ।
ತ್ಯದಲಿ ಒಂದಾಯಿತು ಕೇಳಿ ಜನರೂ ।
ಅದು ಭೂತಾದಿವಸ್ತ ಪ್ರಾಪ್ತವಾಯಿತು ।
ಮೊದಲು ಚಾತುರ್ಮಾಸ್ಯ ಏಕಾದಸೀ ।
ಅದರ ತರುವಾಯ ಕಳಮಾತ್ರಸಾಧನ ।
ಪದವಿಗೆ ಕೇವಲಾ ಶುಚಿಮಾರ್ಗವ್ರೋ ।
ಇದು ಉಲ್ಲಂಘಿಸಿದರೆ ಪಾಪ ಅಲ್ಲಿಗೆ ಪೋಗಾದೊ ।
ಇದ್ದಾರೆ ಎನ್ನಾ ನೇಮ ಭಂಗ ।
ಹದುಳ ತೋರದೇ ಮೌನಿ ಉಭಯಸಂಕಟದಿಂದ ।
ಪದುಮನಾಭನ ಚರಣನೆನೆಸಿ ಗುಣಿಸೆ ।
ಅದೆ ಅದೆ ಸಮಯದಲಿ ದೇವ ನುಡಿದ ತಾನೆ ।
ಉದಯವಾಗದ ಮುನ್ನೆ ಅರುಣನ ಗತಿಗೆ ।
ನದಿ ಭವನಾಶಿಯಾ ಕರಕೊಂಡು ಪಾರಿಜಾ ।
ತದ ವೃಕ್ಷ ಸಮೇತಾ ಬರುವೆನೆಂದೂ ।
ಹೃದಯದೊಳಗೆ ತಿಳಿಸಿ ಪೇಳಿದಂತೆ ಬಂದು ।
ಉದಭವನಾದನು **ಅಹೋಬಲರಾಯಾ** ।
ಗದಗದನೆ ನಡುಗುತ್ತಾ ಅಂಜಳಿ ಪುಟದಿಂದ ।
ತೊದಲು ವಾಕ್ಯಗಳಿಂದ ಹರಿಯ ಸ್ತುತಿಸಿ ।
ತ್ರಿದಶಾದಿ ವಂದ್ಯ ನಾರಸಿಂಹನೆ ಪರಮಾ ಸು ।
ಹೃದಯನೆ ಅನಂತನಾಮಕ ದೇವನೆ ।
ಮದಡಮತಿಗೆ ಒಲಿದು ಉದ್ಧರಿಸಿದೆ ಎಂದು ।
ಹದನವರಿತು ಪುಣ್ಯಗಳಿಸಿಕೊಂಡ ।
ಮಧುವೈರಿ ವಿಜಯವಿಠಲ ಇಲ್ಲಿಪೊಳೆಯಲು ।
ವಿಧಿ ಶಿವಾದ್ಯರು ಬಂದು ವಾಲಗ ಮಾಡಿದರು ೩

### ಅಟ್ಟತಾಳ

ಅನುಗ್ರಹ ಮಾಡಿದೆ ಅನಿಮಿತ್ತ ಬಂಧುವೆ ।
ಎನಗೊಂದು ವರವ ಪಾಲಿಸುವದು ನೀನಿಲ್ಲಿ ।
ಅನುಗಾಲಾ ವಾಸವಾಗಿರಬೇಕು ತೊಲಗಾದೆ ।
ವನದಿ ಸಂಭವೆ ಬೊಮ್ಮ ಶಂಭುಸುರರು ಮಿಕ್ಕ ।
ಮುನಿ ಮನುಗಳು ತೀರ್ಥಾಭಿಮಾನಿಗಳಾ ।
ಜನರೆಲ್ಲಾ ಸನ್ನಿಧಿಯಾಗಿ ಇರಬೇಕು ।
ಮನುಜನಾವನು ಇಲ್ಲಿಗೆ ಬಂದರವನಿಗೆ ।
ಘನ ಪಾಪಾ ಓಡಿಸಿ ಪುಣ್ಯವೆ ತಂದಿತ್ತು ।
ಜನುಮಾಜನುಮಾದಲ್ಲಿ ಜ್ಞಾನವೆ ಕೊಟ್ಟು ನಿ ।
ನ್ನಿನ್ನನೆ ಧೇನಿಸುವಂತೆ ಕೃಪೆಮಾಡು ಎನಲಾಗಿ ।
ಮುನಿಗೆ ಒಲಿದು ವರವನು ಇತ್ತನು ಇತ್ತಾ ।
ಕನಕಮಯವಾದಾಗಿರಿ ಇದೆ ಇದೆ ಇದೆ ।
ವನಧಿ ಬಂಧನ ಕುರು ಜಾಂಗುಲಿ ವಿಶಾಲಾ ।
ಮಣಿಕರ್ಣಿಕೆ ಕಾಶಿ ಶ್ರೀರಂಗಕ್ಷೇತ್ರ ।
ಮಣಿಯಾಗಿಪ್ಪಾದೆಂದು ಅತಿಶಯವಾದಾ ಮಾ ।
ತನು ಕೊಟ್ಟಾ ಪರಮಾತ್ಮ ।
ದಿನ ಒಂದು ನೂರೈದು ಏಳೆಂಟು ಒಂಭತ್ತು ।
ಇನಿತರ ಮೇಲೆ ವೆಗ್ಗಳವಾಗಿ ಇದ್ದರು ।
ಅನಿಮಿಷ ಗಂಗಾತೀರದಲ್ಲಿ ಶತವಸ್ತ್ರ ।
ರನುಸರಿಸಿ ಇದ್ದ ಫಲಕೆ ಮಿಗಲಯ್ಯಾ ।
ಎಣಿಕೆ ಮಾಡುವರ‍್ಯಾರು ಈ ಕ್ಷೇತ್ರದ ಯಾತ್ರಿ ।
ಜನುಮದೊಳಗೆ ಒಮ್ಮೆ ಸಾರಿದಾನಂತ ।
ಜನನಕೆ ಯಾತ್ರಿ ಮಾಡಿದಂಥ ಫಲವಕ್ಕು ।
ಕನಸೀಲಿ ಮನಸೀಲಿ ಚಿಂತಿಸೆ ।
ಧನವಂತನಾಗುವಾ ಇಹ ಪರದಲ್ಲಿ ಸೌಖ್ಯ ।
ಹನುಮಾ ವಂದಿತ ನಮ್ಮ ವಿಜಯವಿಠಲರೇಯಾ ।
ಸನತ್ಕುಮಾರ ನಾರದರಿಗೆ ಒಲಿದ ಕಾಣೋ ೪

### ಆದಿತಾಳ

ಎಸೆವಾ ತೀರ್ಥಂಗಳುಂಟು ಶೇಷ ಮಾರ್ಕಂಡ ಬ್ರಹ್ಮಾ ।
ಬಿಸರುಹನಾಭಾ ಲಕುಮಿ ಹನುಮಾ ರುದ್ರ ರುದ್ರಾಣಿ ।
ಋಷಿ ಗೌತುಮಾ ವಿಭಾಂಡಾ ಸ್ಕಾಂದ ಅಂತರಗಂಗೆ ।
ಬೆಸಸುವೆ ಭೈರವ ಪಾಪವಿನಾಶನ ।
ವಸುಧಿಯೊಳಗಿದ್ದ ಎಲ್ಲಾ ತೀರ್ಥಗಳಕ್ಕು ।
(ಬೆಸನೆ) ಲೋಕದ ಜನರು ಬಂದು ವಿಧಾನ ತಿಳಿದು ।
ಕುಶಲ ಮತಿಯಿಂದ ಸತ್ಕರ್ಮಾಚರಿಸಲು ।
ವಶವಾಗಿಪ್ಪಾರು ಸರ್ವದೇವತೆಗಳು ।
ವಿಷಯಗಳಲಿ ಬಿದ್ದು ಕೆಟ್ಟುಪೋಗದೆರ ।
ಕ್ಕಸಯೋಗ ಮಾಡದಿರಿ ಗತಿಗೆ ಮಾರ್ಗವಾಗದು ।
ಅಸುರ ವಿರೋಧಿ ನಮ್ಮ ವಿಜಯವಿಠಲರೇಯಾ ।
ನಸುನಗುತ ಗಂಡಿಕಿ ಶಿತಿಯೊಳಗಿರುತಿಪ್ಪ ೫

### ಜತೆ

ಪರಮಾಯು ಸಿದ್ಧಿಪದು ಮಾರ್ಕಂಡ್ಯಕ್ಷೇತ್ರಾ ।
ನರಸಿಂಹಾನಂತಾ ವಿಜಯವಿಠಲ ವಾಸಾ ೬

## ೯. ಉಡುಪಿ

### ರಾಗ: ಶಹನಾ

### ಧ್ರುವತಾಳ

ಅಣುಮೂರುತಿ ಪರಮಾಣು ಮೂರುತಿ ಇದೆ ।
ಘನ ಮೂರುತಿ ಮಹಘನವಾದ ಮೂರುತಿ ।
ತೃಣ ಕಾಷ್ಠ ಮೊದಲಾದ ಪರಿಪೂರ್ಣ ಮೂರುತಿ ।
ಗುಣತ್ರಯಾತ್ಮಕವಾದ ಗುಣವಂತ ಮೂರುತಿ ।
ಮನುಜೋತ್ರಮರವಿಡಿದ ವನಜಭವಾದ್ಯರ ।

ಮನಕೆ ಪೊಳೆವ ಮೂರುತಿ ಚಿನುಮಯ ಮೂರುತಿ ।
ದನುಜಕುಲಕೆ [ತ]ಲ್ಲಣವಾದ ಮೂರುತಿ ।
ರಣದೊಳಗರ್ಜುನನ್ನ ತನು ಉಳುಹಿದಾ ಮೂರ್ತಿ ।
ಕ್ಷಣವಗಲದೆ ಜೀವನ ಕೂಡಲಪ್ಪದಿದೆ ।
ಅನಿರುದ್ಧ ಮೂರುತಿ ಅಚ್ಯುತ ಮೂರುತಿ ।
ಜನನಿ ಗೋಪಿಯ ಮುಂದೆ ಮೊಸರು ಕ[ಟೆ]ವಾಗ ।
ಕುಣಿದ ಮೂರುತಿ ಅಪ್ರಮೇಯ ಮೂರುತಿ ಇದೆ ।
ಪ್ರಣವ ಮೂರುತಿ ಮಧ್ವಮುನಿಗೊಲಿದ ಉಡು ।
ಪಿನ ವಾಸ ಶಿರಿಕೃಷ್ಣ ।
ಎನ್ನ ಮೂರುತಿ ವಿಜಯವಿಠಲನಿರುತಿಪ್ಪ ೧

### ಮಟ್ಟತಾಳ

ದ್ವಾರವತಿ ಎತ್ತ ಪಡುವಲ ದಿಕ್ಕಿನ ।
ವಾರಿನಿಧಿ ಎತ್ತ ಗೋಪಿಚಂದನವೆತ್ತ ।
ಮಾರಾಟದ ಹಡಗ ಪೋಗಿ ಬರುವದೆತ್ತ ।
ಭಾರತಿ ಪತಿಯಾದ ಮಧ್ವಮುನಿ ಎತ್ತ ।
ಈ ರೀತಿ ಸಂಗತಿಯಾ ಆವಲ್ಲಿ ಕಲ್ಪಿಸೀ ।
ತೋರಿದಿಯೋ ದೇವ ಆರು ಬ ।
ಲ್ಲರು ನಿನ್ನ ಮಹಾವಿಚಿತ್ರವು ।
ಸಾರಲಾ[ಪೆನೆ] ನಿತ್ಯ ಉಡುಪಿನ ಶಿರಿಕೃಷ್ಣ ।
ಜಾರ ಚೋರ ನಮ್ಮ ವಿಜಯವಿಠಲರೇಯಾ ೨

### ತ್ರಿವಿಡಿತಾಳ

ಅಂದು ದೇವಕಿದೇವಿ ದ್ವಾರಕಾ ಪುರದಲ್ಲಿ ।
ಒಂದು ದಿವಸ ನಿನ್ನ ಮಾಯಾ ಮುಸುಗೇ ।
ಕಂದ ನೀನಾಗಿ ಗೋಕುಲದಲ್ಲಿ ಗೋಪಿಯಾ ।
ಮುಂದೆ ಬಾಲಕನಾಗಿ ತೋರಿದಾಟಾ ।
ಒಂದಾದರು ನೋಡಿ ದಣಿಯಲಿಲ್ಲವು ಮನಸು ।

ಎಂದೆನೆ ಜನನಿಯಾ ಮಾತುಕೇಳಿ ।
ನಂದನನಾಗಿ ತೋರುವೆನೆಂದು ನೆನೆದು ಗೋ ।
ವಿಂದನು ಗೋಪಳ್ಳಿಯಲಿ ನಲಿದದ್ದು ।
ಒಂದೊಂದು ತೋರುತ್ತ ಬರಲಾದಾರೊಳಗಿದೆ ।
ಚಂದವಾದಾರೂ ಪಾ ಮನಕೆ ಪೊಳಿಯೇ ।
ನಿಂದಿರ ಪೇಳಿ ಮಗನಾ ಮುದ್ದಾಡಿ ನೋಡಿ ।
ತಂದೆ ಈ ರೂಪದಲಿ ಭೂಮಿಯೊಳಗೆ ।
ಕುಂದಾದರ್ಚನೆಗೊಂಡು ಕೀರ್ತಿಮೆರೆವದೆಂದು ।
ಮಂದಹಾಸದಲ್ಲಿ ಪೇಳಲು ಕೈಕೊಂಡೂ ।
ಒಂದು ಕೈಯಲಿ ಕಡಗೋಲು ಪಿಡಿದು ಮ ।
ತ್ತೊಂದು ಕೈಲಿ ನೇಣು ಧರಿಸಿ ಬಾಲಾ ।
ನಂದಾದಿ ಇರಲಿತ್ತ ಭೈಷ್ಮಿ ವಿಶ್ವಕರ್ಮಾ ।
ನಿಂದ ಅದರಂತೆ ರಚಿಸಾ ಪೇಳಿ ।
ನಂದಾದಿಂದತಿ ತನ್ನ ಮೂಗುತಿಯನು ಇಟ್ಟು ।
ಸುಂದರ ವಿಗ್ರಹ ದೊಡನಾಡುತ ।
ಇಂದಿರೆ ಇರ ಇತ್ತ ಕಲಿಯುಗಬರೆ ಗೋಪಿ ।
ಚಂದನದೊಳು ನಿನ್ನ ಅಡಗಿಸಲೂ ।
ಸಿಂಧುವಿನೊಳಗೊಬ್ಬ ಹಡಗದ ವಶಕೆ ।
ತಂದಿರೆ ತವಕದಿಂದಲಿ ಅಲ್ಲಿಂದ ।
ನಂದಾತೀರ್ಥರಿಗೊಲಿದ ಉಡುಪಿನ ಶಿರಿಕೃಷ್ಣ ।
ಕಂದರ್ಪಪಿತ ನಮ್ಮ ವಿಜಯವಿಠಲರೇಯಾ ೩

## ಅಟ್ಟತಾಳ

ಈ ಉಡುಪಿನ ಯಾತ್ರಿ ಶ್ರೀ ವೈಕುಂಠದ ಯಾತ್ರಿ ।
ಆವಾವಮನುಜನು ಸೇವಿಸಾಲು ಮರಿ ।
ತವನ ದಾವನ, ಪಾವನ ಮಾಡುವ ।
ಯಾವತ್ತು ಜನುವದ ನೋವುಕಳದು ತನ್ನ ।
ಸೇವಿಯೊಳಿಟ್ಟು ಅಪವರ್ಗಕೊಡುವಾನು ।

ದೇವಕಿ ನಂದನ ಕೃಷ್ಣ ಮೂರುತಿ ಕರು ।
ಣಾವರಧಿ ನಮ್ಮ ವಿಜಯವಿಠಲರೇಯ ।
ಜೀವೋತ್ತಮಾ ಮಧ್ವಮುನಿದೈವವೇ ೪

### ಆದಿತಾಳ

ಇದೆ ಜನುಮ ಸಾರ್ಥಕಾ । ಇದೆ ಸರ್ವಕಾಯಸಿದ್ಧ ।
ಇದೆ ಕುಲಕೋಟಿ ಉದ್ಧಾರ । ಇದಕ್ಕಿಂತಧಿಕವಿಲ್ಲ ।
ಇದಕೆ ಸಮಾನವಿಲ್ಲ । ಇದೆ ಮುಖ್ಯಯಾತ್ರಿ ಎನ್ನಿ ।
ಇದೆ ಇದೆ ಇದೆ ಸಿದ್ಧ । ಯದು ಕುಲೇಶನ ದಿವ್ಯ ।
ಪದಗಳ ಒಮ್ಮೆ ನೋಡೆ । ಪದವಿಗೆ ಸೋಪಾನ ।
ಮುದದಿಂದ ಸ್ಥಿರವಹದು । ಸದಮಲಾ ।
ನಂದ ಮುನಿಗೊಲಿದ ಮುದ್ದು ಕೃಷ್ಣನು ।
ಹೃದಯರ ಮನೋವಾಸ । ವಿಜಯವಿಠಲ ಪಡುವಲ ।
ಉದಧಿ ತೀರದಲಿಪ್ಪ । ಇದೆ ದ್ವಾರಕಿ ಎಂದು ೫

### ಜತೆ

ಮಧ್ವಸರೋವರ ಸ್ನಾನ । ಮುದ್ದುಕೃಷ್ಣನ ಧ್ಯಾನ ।
ಶುದ್ಧನಾಗಿ ಮಾಡೆ ವಿಜಯವಿಠಲಕಾವಾ ೬

## ೧೦. ಉಡುಪಿ

### ಧ್ರುವತಾಳ

ಆದಿಮೂರುತಿ ಪರಶುರಾಮನು ಸರ್ವ ।
ಮೇದಿಸುರರಿಗೆ ಧಾರಿ ಎರೆದೂ ।
ಮುದದಿಂದಲಿ ಸಿಂಹಾಚಲದಲ್ಲಿ ವಾಸವಾಗಿ ।
ಕೈದು ಶಳದು ವಾರಿನಿಧಿಯಿಂದಲೀ ।
ಮೇದಿನಿ ಬಿಡಿಸಿದ ಪ್ರತಾಪವನ್ನೆ ತೋರಿ ।
ವೇದಪಾಲಕ ಮೆರದ ಸ್ತುತಿಗಳೆಂದ ।

ಈ ಧರಿಗೆ ರಾಮಾ ಭೋಜನೆಂಬೊ ಭೂಪನಾ ।
ಆದರದಿಂದಲಿ ಇರಪೇಳಲೂ ।
ಮೇಧಾವ ರಚಿಸಿ ಭಾರ್ಗವನ ಸತ್ಕರುಣ ಸಂ ।
ಪಾದಿಸುವೆನೆಂದು ಧಾರುಣಿಯಾ ।
ಶೋಧಿಸೆ ಅದರೊಳು ಒಂದಹಿ ನೇಗಲಿಗೆ ।
ಭೇದಾವಾಗಿ ಬರಲು ನಡುಗಿ ನೃಪತೀ ।
[ಹೇ] ದಯಾಂಬುಧಿ ಎನ್ನಾಪರಾಧ ಕ್ಷಮಿಸೆಂದು ।
ಪಾದಕೆ ನಮಿಸಿ ಬಿನ್ನೈಸಿ ।
ಸಾಧು ಜೀವನು ರಾಮಗೆ ಮೊರೆಯಿಡಲೂ ವಿ ।
ನೋದದಿಂದಲಿ ಬಂದು ತಿಳುಪಿದನು ।
ಸಾಧನಾ ನಿನಗಿದೆ ಪಾಪಾ ಮತ್ತಿಲ್ಲವೆಂದು ।
ಮೈದಡವಿ ಉಪದೇಶಿದಾ ।
ಕ್ರೋಧದನುಜ ಭಂಗ ವಿಜಯವಿಠಲ ಪ್ರಾ ।
ಬೋಧಶರೀರ ಕ್ಷೇತ್ರವರ್ಗಾಸಂಹಾರ ೧

## ಮಟ್ಟತಾಳ

ಅರಸು ರಾಮಭೋಜಾ ದ್ವಾರದ ಸಭೆಯಲ್ಲಿ ।
ಪರಶುಧರಗೆ ಬಂದು ಹರಿಮಣಿತೆತ್ತಿಸಿದ ।
ಪರಮ ರಜತವಿಷ್ಟರವನ್ನು ನೇಮಿಸಿ ।
ಹರುಷದಿಂದಲಿ ಸ್ತೋತರ ಮಾಡುತ್ತಯಾಗ ।
ವಿರಚಿಸಿ ನಿತ್ಯ ಭೂಸುರರು ಸುಖಬಡಿಸಿ ।
ಮರಳೆ ಸಿಂಹನಾಮಗಿರಿಯಲ್ಲಿ ಜನಿಸಿ ।
ಮೆರೆವ ಸೂ–ವರ್ನಾ ಸರಿತೆಯಲ್ಲಿ ಮಿಂದು ।
ಪರಿಪರಿ ಬಗೆಯಿಂದ ಇರುತಿರೆ ಇತ್ತಲು ।
ಧರೆಯೊಳಗಿದು ಪೆಸರು ರಜತ ಪೀಠಪುರವೆಂದೆನಿಸಿತು ।
ಸರಿಯಿಲ್ಲ ಇದಕೆ ಕರಿಸಿತು ಭಾರ್ಗವನ ।
ಕರುಣದಿಂದಲಿ ಇಲ್ಲಿ ಸರಸಿಜ ಸಂಭವ ।
ಪುರಹರ ಸುರನಿ[ತ]ರಾ ನೆರೆದು ಪೂಜಿಸುವರೂ ।

ನಿರುತದಲಿ ಬಿಡದೆ ಕರುಣಾಕರ ಸಿರಿ ವಿಜಯವಿಠಲನ್ನ ।
ಚರಣವ ನೆನದಾ ದಾಸರಿಗೆ ಬಲು ಸುಲುಭ ೨

### ತ್ರಿವಿಡಿತಾಳ

ಒಂದು ಕ್ರೋಶ ಉದ್ದ ಅದರಷ್ಟು ಅಗಲಾ ಆ ।
ನಂದವಾಗಿಪ್ಪ ಒಪ್ಪುವ ಗದ್ದುಗೇ ।
ಕುಂದಾದೆ ತನ್ನಿಂದಾ ತಾನೆ ಇಳಿದು ವ ।
ಸುಂಧರದೊಳಗಡಿಗಿತು ಸೋಜಿಗ ।
ಪೊಂದಿತು ಲೋಕವು ಇತ್ತರಾಮ ಭೋಜಾ ।
ಒಂದು ಕನಕ ಶೇಷಾಸನ ಮಾಡಿಸೀ ।
ತಂದು ಇಡಿಸಿ ಧ್ಯಾನಮಾಡಿದ ಭಾರ್ಗವ ।
ಬಂದಿದರ ಮಧ್ಯ ನಿಲಬೇಕೆಂದೂ ।
ಅಂದಾಮಾತಿಗೆ ಮೆಚ್ಚಿ ಪರಶುರಾಮನು ಲಿಂಗಾ ।
ದುದಾದಿ ನೆಲಸಿದ [ಅ]ಹಿ ನಡುವೆ ।
ಅಂದಾರಭ್ಯವಾಗಿ ಇದೇ ಅನಂತಸನಾ ।
ಎಂದೆನಿಸಿತು ಈತ ಹರಿ ಕಾಣಿರೊ ।
ನಂದಿವಾಹನನಂತೆ ತೋರಿದ ಬಲುಹೀನ ।
ಮಂದಾಜನಕೆ ತಮವಾಗಲೆಂದೂ ।
ಸಂದೇಹಬಡಸಲ್ಲಾ ಸುಜನರು ಈತನೆ ।
ಇಂದಿರಾಪತಿಯೆಂದು ವಂದಿಸಿರೋ ।
ಮಂದಹಾಸವದನ ವಿಜಯವಿಠಲನಿಪ್ಪ ।
ಇಂದು ಕ್ಷೇತ್ರವಿದು ವಿವರಿಸಿ ತಿಳಿವದೂ ೩

### ಅಟ್ಟತಾಳ

ಜಲಜ ಸಂಭವನ ಪುತ್ರ ದಕ್ಷನು ಶಪಿಸಲು ।
ಕಳೆಗುಂದಿ ಚಂದ್ರಮತಿ ತಿಳಿದು ಭಾರ್ಗವ ಕ್ಷೇತ್ರ ।
ದೊಳಗೆ ಇದೇ ವೆಗ್ಗಳಿಯಾ ಸ್ಥಳವೆಂದೂ ।
ಕುಳಿತಾ ಜಾರಣ್ಯ ಮಧ್ಯದಲಿ ತಪಮಾಡಿ ।
ಒಲಿಸಿ ತನ್ನನು ಧರಿಸಿದ ದೇವನ ಪಾದ ।

ಜಲಜಾವ ಕಂಡು ಶಾಪವನ್ನು ಪೋಗಾಡಿ ।
ಕಳೆವೇರಿದನು ದಿನಪ್ರತಿಯಲ್ಲಿ ಪೊಳವುತ್ತ ।
ಪುಲಿದೊ[ವ]ಲಾಂಬರ[ನು] ಅನಂತಾಸನ್ನ ।
ಬಳಿಯಲ್ಲಿ ನಿಂದನು ಸಮು[ಖ]ವಾಗಿ ನಿ ।
ಶ್ಚಲ ವರ[ವೀ]ವುತ ಬಂದ ಭಕ್ತರನ್ನ ।
ಸಲಹುತ್ತ ಚಂದ್ರಮೌಳೇಶ್ವರನೆಂದೆಂಬಾ ।
ಸತಿ ಪೆಸರಿನಲ್ಲಿ ಮೆರೆವುತಲಿಪ್ಪದು ।
ಕಲಿಯುಗದಲಿ ಬಂದಾ ಕೃಷ್ಣ ವಿಜಯವಿ।
ಠಲ ನಾನಾ ಮಂಗಳಾ ನೆನೆಯುತ್ತ ನಲಿವುತ್ತ ೪

**ಆದಿತಾಳ**

ಪರಶುರಾಮನು ತನ್ನ ಸಿರಿಯಕೂಡಾ ವಿಮಾನ ।
ಗಿರಿಯಲ್ಲಿನಿಂದಾನು [ಸು]ರರಿಂದರ್ಚನೆಕೊಳ್ಳುತ್ತ ।
ಅರಸು ತಾನಾಗಿ ನಿರಂತರದಲ್ಲಿ ಒಪ್ಪುತಿಪ್ಪ ।
ಪರಮಪುರಷನೀತ ನರನೆಂದು ಪೇಳಸಲ್ಲ ।
ಪರಮಶುದ್ಧನಾಗಿ ನರನು ಬಂದು ಈ ಕ್ಷೇ ।
ತುರದಲ್ಲಿ ಇದ್ದ ಮಹಿಮೆ ಅರಿದು ಆತುರದಿಂದ ।
ಪುರುಷಗದಚಾಪ ಶರಬೊಮ್ಮ ಚಂದ್ರ ಶಂ ।
ಕರ ವಶಿಷ್ಠ ಸೂದರುಶನ ಪದುಮಾ ।
ಪರಿ ಪರಿ ತೀರ್ಥಂಗಳು ಚರಿಸಿ ಜ್ಞಾನದಲಿ ಮಿಂದರೆ ಬಹುಜನ್ಮದ ।
ಹರಿದು ಪಾಪಗಳು ಪರಿಹರಿಪೋಗುವವು ।
ಭರತ ಖಂಡದೊಳು ಸರಿಯಿಲ್ಲಾ ಇದಕೆಲ್ಲಿ ।
ಸ್ಮರಣೆ ಮಾತ್ರದಲಿ ಸಂಚರಿಸುವ ಮುಕ್ತಿಯಲ್ಲಿ ।
ಪರಶುಧರ ಕೃಷ್ಣ ವಿಜಯವಿಠಲರೇಯಾ ।
ಪರಿಣಾಮ ಕೊಡುವನು ಪರತತ್ವ ತಿಳಿವುದೂ ೫

**ಜತೆ**

ಭಾರ್ಗವ ಕ್ಷೇತ್ರದೊಳಿದೆ ಕೇವಲಧಿಕ ।
ದುರ್ಗರಮಣ ವಿಜಯವಿಠಲ ನಮ್ಮನ್ನು ಪೊರೆವ ೬

## ೧೧. ಉಡುಪಿ

### ರಾಗ: ಭೈರವಿ

### ಧ್ರುವತಾಳ

ಆವ ಸುಕೃತವೊ ಮತ್ತಾವ ಗುರುಗಳ ದಯವೊ ।
ಆವಾವ ಗೋತ್ರದಲ್ಲಿ ಉದ್ಭವಿಸಿದ ಫಲವೊ ।
ಆವ ಪುತ್ರನು ಸತ್ಕರ್ಮ ಮಾಡಿದ ಪುಣ್ಯವೊ ।
ಆವ ನಿಜರಾಣಿ ನಡಕೊಂಡ ಬಗೆಯೊ ।
ಆವ ಸುಜನ ಬ್ರಾಹ್ಮಣರು ಹರಸೀದ ಹರಕೀಯೊ ।
ಆವ ಬಾಂಧವನು ಪೇಳಿಕೊಟ್ಟ ಮಾರ್ಗವೊ ।
ಆವ ಕ್ಷೇತ್ರದಲ್ಲಿ ಮಾಡಿದ ಸಾಧನವೊ ।
ಆವ ತಾತ್ವಿಕರು ಪ್ರೇರಿಸಿ (ಹರಿಸಿದ) ಭಾಗ್ಯವೊ ।
ಆವಾವದು ಎನಗೆ ಒಂದಾದರು ತಿಳಿಯದು ।
ಭಾವಜ್ಞರು ಬಲ್ಲರು ಸ್ಥಿತಿಗತಿಯಾ ।
ಈ ಉಡುಪಿನ ಯಾತ್ರೆ ಮಾಡುವಗೋಸುಗ ।
ಪಾವಮಾನಿಯ ಮತದಲ್ಲಿ ಪೊಂದಿ ನಿತ್ಯ ।
ಪಾವನನಾಗಿ ನಡೆತಂದವರ ಸೌಭಾಗ್ಯ ।
ದೇವತಿಗಳು ಕೊಂಡಾಡುವರು ।
ಜೀವನಮುಕ್ತ ನಾವಾಕುಲಗೋತ್ರರೊಡಗೂಡಿ ।
ಕೈವಲ್ಯಾದಲ್ಲಿ ಮುಂದೆ ಸುಖಿಸುವರು ।
ಜೀವೇಶ ಮಧ್ವಮುನಿಯಿಂದ ಪೂಜಿಯಗೊಂಡ ।
ಶ್ರೀ ವಾಸಾ ನಮ್ಮ ಸಿರಿ ವಿಜಯವಿಠಲರೇಯಾ ।
ಕಾವಾನು ಕೃಪೆಯಿಂದ ಧರ್ಮ ಮಾರ್ಗವು ತೋರಿ ೧

### ಮಟ್ಟತಾಳ

ಸಕಲ ಸಂರಕ್ಷಕರು ಮಾತೆಯ ತರುವಾಯ ।
ಸಕಲ ಬೋಧಕರೆಲ್ಲಾ ತಂದೆಯ ತರುವಾಯ ।
ಸಕಲ ಸುಖಗಳೆಲ್ಲ ಭುಕ್ತಿಯ ತರುವಾಯ ।

### ಅಟ್ಟತಾಳ

ಉಡುಪಿನ ಯಾತ್ರೆಯ ಮಾಡಿದವ ನಿತ್ಯಾ ।
ಪೊಡವಿಯೊಳಗುಳ್ಳ ಯಾತ್ರಿಯ ಚರಿಸಿದವ ।
ಉಡಿಪಿನ ಯಾತ್ರೆಯ ಮಾಡಿರೋ ಮಾಡಿರೋ ।
ಕೊಡಬೇಡ ಕೊಡಬೇಡ ಕೊಟ್ಟರೊಂದೆ ಕಾಸು ।
ಅಡಿಗ[ಡಿ]ಗೆ ನೂರು ಮಡಿ ಫಲವಾಹದು ।
ಉಡುಪಿನ ಯಾತ್ರೆಯ ಮಾಡದಿದ್ದರೆ ಪುಣ್ಯ ।
ಕೆಡುವುದು ಮುದ್ರೆ ಇಲ್ಲದ ದ್ರವ್ಯದಂತೆ ।
ಜಡಮತಿ ಕಳೆವ ವಿಜಯವಿಠಲ ಕೃಷ್ಣ ।
ಬಿಡನೋ ಬಿಡನೋ ತನ್ನ ಬಳಿಗೆ ಬಂದವನ ೪

### ಆದಿತಾಳ

ಇದೆ ಇದೆ ಭಾಗ್ಯವಿದೆ ಇದೆ ಇದೆ ಭಾಗ್ಯವೆಂದು ।
ಯದುಕುಲೋತ್ತಮನ ಪದಗಳ ನೋಡುವುದು ಭಾಗ್ಯ ।
ಇದೆ ಇದೆ ಇದೆ ಲಾಭ ಇದೆ ಎನಗೆ ಪರಮಲಾಭ ।
ಸುಧಾ ಗ್ರಂಥ ಓದಿದವರ ಪದದರುಶನವಾಗೆ ।
ಪದ ಹಸ್ತ ನಯನನಾಸ ವದನ ಕರ್ನ ನಾಲಿಗೆ ।
ಸದಾ ಇದ್ದದಕೆ ಸಿದ್ಧ ಇದೆ ಸಾರ್ಥಕ ದಿವಸ ।
ಮುದದಿಂದ ಎನ್ನಯ ಹೃದಯಾನಂದವಾಯಿತು ।
ಮಧುಸೂದನ ಕೃಷ್ಣ ವಿಜಯವಿಠ್ಠಲರೇಯನ ।
ನಿದರುಶನ ಯಾತ್ರಿ ಇಹದಲ್ಲಿ ಫಲವ್ಯಾಕೆ ೫

### ಜತೆ

ಶ್ರೀ ಮದಾಚಾರ್ಯರಿಗೆ ಒಲಿದಾ ಉಡುಪಿ[ಯ] ಕೃಷ್ಣಾ ।
ಶ್ರೀಮನೋಹರ ನಮ್ಮ ವಿಜಯವಿಠ್ಠಲರೇಯಾ ೬

## ೧೨. ಉಡುಪಿ

### ರಾಗ: ಕಾಂಬೋಧಿ

### ಧ್ರುವತಾಳ

ಎಲ್ಲೆ ವೈಭೋಗಾವಿದು ಎಲ್ಲೆ ವೈಭವವಿದು ।
ಎಲ್ಲೆ ಆನಂದಾವಿದು ಎಲ್ಲಿ ಅದ್ಭೂತವಿದು ।
ಎಲ್ಲಿ ಸೌಖ್ಯಾವಿದು ಎಲ್ಲಿ ವಿಚಿತ್ರವಿದು ।
ಎಲ್ಲೆ ಐಶ್ವರ್ಯವಿದು ಎಲ್ಲಿ ನಾಟಕವಿದು ।
ಎಲ್ಲೆ ಅಮೋಘವಿದು ಎಲ್ಲಿ ಪರಾಕು[ಇ]ದು ।
ಎಲ್ಲಿ ಸ್ತೋತ್ರವಿದು ಎಲ್ಲಿ ಪರಿವಾರವಿದು ।
ಎಲ್ಲಿ ವಾಲಗವಿದು ಎಲ್ಲೆಲ್ಲಿ ನೋಡಿದರು ।
ಇಲ್ಲವೊ ನಿನ್ನ ಸರಿ ಬಲ್ಲಿದರಿಳಿಯೊಳು ।
ಸಲ್ಲುವಾದಿದು ಇಂದೆ ಅಲ್ಲದೆ ದ್ವಾರಾವತಿ ।
ವಲ್ಲಭಾ ಗೋಕುಲದಲ್ಲಿ ನಿಂದಾಡಿದಾಗ ।
ಗೊಲ್ಲರ ಮಕ್ಕಳೊಡನೆ ಕಳ್ಳತನಕೆ ಸರುವಾ ।
ದಲ್ಲಿ ಸಂಚರಿಸಿದ್ದು ಎಲ್ಲ ದೇವರದೇವ ।
ಕಲ್ಲಿದಾಗರ ಪೆಗಲಿನಲ್ಲಿ ಪೊತ್ತುಕೊಂಡು ।
ಬಳ್ಳಿ ಉಡಿಗೆ ಉಟ್ಟ ಗುಲ್ಲಿ ಮಾಡುವ ಚೀಲ ।
ಸೊಲ್ಲು ಸೊಲ್ಲಿಗೆ ಬಂದು ಸುಳ್ಳು ಮಾತುಗಳಲ್ಲಿ ।
ನಿಲ್ಲಾ ದಿನಕಳದಾದ್ಯೆಲ್ಲಾ ಎಲ್ಲಿ ಪೋಯಿತೊ ।
ಒಳ್ಳೆಯವನಾಗಿ ಉಡುಪಿಯಲ್ಲಿ ನೆಲಸಿ ಅರ್ಥಿ ।
ಯ[ಲ್ಲಿ]ಯತಿಗಳಿಂದ ಸಲ್ಲಿಲಿತ ಸಂಪೂಜೆ ।
ಗೊಳ್ಳುತ ಮೆರವವ ಭಳಿರೆ ಭಳಿರೆ ಹೊ ಹೊ ।
ಎಲ್ಲ ಉಪಾಯವನ್ನು ಬಲ್ಲ ಬಲವಂತರೊಡಿಯಾ ।
ಬಲ್ಲವರಾರು ಗುಣವಲ್ಲಿಗಳು ನಿನ್ನವು ।
ಬೆಳ್ಳಿಗದ್ದುಗಿ ಪುರದಲ್ಲಿ ಇಪ್ಪ ವಿಜಯ ವಿ ।
ಠಲ ಉಡುಪಿನ ಶ್ರೀ ಕೃಷ್ಣ ।
ಪಳ್ಳಿಗೋವಳ ಹಟ್ಟಿಯಲ್ಲಿ ಮೆರದೆ ನೀನು ೧

### ಮಟ್ಟತಾಳ

ನಾಕಜನರ ಸನಕಾದಿಗಳ ಶೌನಕಾದ್ಯರ [ಮ] ।
ನಕೆ ತೋರದ ಕನಕಾಂಬರಧರ ।
ನಾ ಕಾಣೆನೊ ನಿನ್ನ ಕಪಟತನಕೆ ಎಲ್ಲೆಲ್ಲಿ ಪಿ ।
ನಾಕಧ[ರರಾ]ಪ್ತ ಜ್ಞಾನ ಕಾಯಾ ಸಿದ್ಧ ವಿಜಯವಿಠಲ ಕೃಷ್ಣ ೨

### ತ್ರಿವಿಡಿತಾಳ

ಜಾರ ಚೋರನಾಗಿ ಜಗದೊಳು ಪೆಸರಾಗಿ ।
ನಾರೇರಮನ ಅಪಹಾರಗೈಸಿದೆ ಅಂದು ।
ಪೋರರ ಸಂಗಡ ಕೆಲವಾಡಿ ಕಂಡಲ್ಲಿ ।
ಹಾರ್‍ಯಾಡಿ ಹ[ಲ]ಬಾರಿಂದಲಿ ಕೊಂಡಾಡಿ ।
ಊರ ಜನಕೆ ಎಲ್ಲ ತಲೆ ಹೊರೆಯಾಗಿ ಸಂ ।
ಸಾರವಕೊಂಡಿ ಎಲ್ಲೊ ಪರಸ್ತ್ರೀಯರ ।
ಆ ರಾಸ ಕ್ರೀಡೆಯಲ್ಲಿತ್ತೆ ಮತ್ತೆವನದೊಳಬ್ಬ ।
ನಾರೀಯ ಪೆಗಲೀಲಿ ಪೊತ್ತು ನಡದೆ ।
ಪೋರಾತನದಲಲಿ ನೀಚೋಚ್ಚಾ ನೋಡದೆ ।
ಸಾರಿಸಾರಿಗೆ ಎಂಜಲು ಮೆಲವುತ್ತ ।
ಈ ರೀತಿಯಲಿ ಇದ್ದೆ ಒಬ್ಬರಾದರೂ ನಿನ್ನ ।
ಆರಾಧನೆ ಮಾಡಿದವರಲ್ಲಾ ಕಾರುಣ್ಯಾ ।
ಮೂರುತಿ ಉಡುಪಿಯ ಕೃಷ್ಣ ವಿ ।
ಸ್ತಾರ ಮಹಿಮ ಸಿರಿ ವಿಜಯವಿಠಲರೇಯಾ ೩

### ಅಟ್ಟತಾಳ

ಚೆಲುವನು ನಮಗೆಂದು ನಂದಗೋಪಗೋಪಿ ।
ತಿಳಿದು ನಿನ್ನ ಪೂಜಿಸಲಿಲ್ಲವಯ್ಯಾ ।
ಗೆಳಿ ರಾವು ಎಂದು ಗೋಮಕ್ಕಳು ಅಂದು ।
ತಿಳಿದು ನಿನ್ನ ಪೂಜಿಸಲಿಲ್ಲವಯ್ಯಾ ।

ಬಲು ನಾರಿಯರು ಕಾಮಾತುರದಿಂದ ।
ತಿಳಿದು ನಿನ್ನ ಪೂಜಿಸಲಿಲ್ಲವಯ್ಯಾ ।
ಕುಲದಲ್ಲಿ ಪುಟ್ಟಿದನೆಂದು ಯಾದವರು ।
ತಿಳಿದು ನಿನ್ನ ಪೂಜಿಸಲಿಲ್ಲವಯ್ಯಾ ।
ಇಳಿಯ ವಲ್ಲಭ ಉಗ್ರಸೇನನು ನಿನ್ನನಾ ।
ಕೆಳಗೆ ನಿಲ್ಲಿಸಿ ವಾಲಗಾಕೊಂಡನಯ್ಯಾ ।
ತಿಳಿದುಕೋನಿನಗಂದು ಒಬ್ಬರಾದರು ನಿ ।
ಶ್ಚಲ ಭಕುತಿಯಿಂದ ಭಜಿಸಲಿಲ್ಲ ।
ಎಲೊದೇವ ಉಡುಪಿನ ಕೃಷ್ಣ ವಿಜಯ ವಿ ।
ಠಲ ನಿನಗೀ ಪೂಜೆ ಎಲ್ಲಿಂದ ಒದ[ಗಿ]ತು ೪

**ಆದಿತಾಳ**

ಇದ್ದರಿದ್ದಾರಾದಾರು ಒಂದಾರೆ ಅರ್ಚಕಾರು ।
ಶುದ್ಧಯತಿಗಳಿಂದ ಪೂಜೆಗಳಂದು ನಿನಗೆ ।
ಇದ್ದಿಲ್ಲವೆಂಬೋದು ಲೋಕವೆ ಬಲ್ಲೋದು ।
ಕದ್ದು ತಿಂದವನಿಗೆ ಬಲು ಬಲು ಉಪಚಾರ ।
ಉದ್ದಿನಕಾಳಷ್ಟು ಕೊರತೆಯಾಗದಂತೆ ।
ಪದ್ಧತಿ ತಪ್ಪದೆ ಉದಯಾಸ್ತಮಾನ ತನಕ ।
ತಿದ್ದಿಮಾಡಿದ ವಸ್ತ್ರಾದಿವ್ಯವಸನರತುನ ।
ಗದ್ದುಗೆ ಮೇಲೆ ನಿಂದು ಮೇಲಾದ ಶಾಖಪಾಕ ।
ಮಿದ್ದು ಮಾಡಿದ ಭಕ್ಷಾ ಪರಮಾನ್ನ ಓದನಾ ।
ಮುದ್ಗನ್ನಾ ಮಿಗಿಲಾದ ಷಡುರಸ ಪದಾರ್ಥ ।
ಮುದ್ದೆ ಮುದ್ದೆ ಕವಳ ತಪ್ಪದೆ ನಿರಂತರ ।
ಮೆದ್ದು ಮಂಗಳಾರತಿ ಬೆಳಗಿನಿಂದಲಿ ಒಪ್ಪಿ ।
ಪೊದ್ದಿಕೊಂಡಿಪ್ಪೆ ಸುಖ ಪಳ್ಳಿಯೊಳಗಿತ್ತೆ ।
ಹೆದ್ದೈವತನಬಿಟ್ಟು ಚಿಕ್ಕ ಮಕ್ಕಳ ಕೈಯ್ಯಾ ।
ಗುದ್ದಿಸಿಕೊಂಡದ್ದು ಮರದಿಯೊ ಎಲೊ ದೇವ ।
ಬದ್ಧ ಪುಟಾಂಜಲಿ ಹಸ್ತದಿಂದಲಿ ನಿಂದು ।

ಸದರವಿಲ್ಲಾದಲೆ ಉಳಿದ ಜಲವಿತ್ತ ಪ ।
ರಿದುದ ಶಿವ ನಿರ್ಮಲ್ಯಾನದಿ ಜಾನ್ಹವಿ ಎನಿಸೀತೀ ।
ಉದುಕಾವೆನಿಸಾಲಿಲ್ಲಾ ಸದಮಲವೆನ್ನಿರೋ ।
ಪದುಮಾ ಸಂಭವನಾ ಯಾಗದಾ ಉಪಚಾರಕ್ಕೆ ।
ವದಗೀದಾಳಿಂದಿ ಶ್ಯೆಲದ ತಪ್ಪಾಲಲ್ಲಿಗೇ ।
ಪದುಮನಾಭನು ಕರುಣಾದಲಿ ಇಲ್ಲಿಗೆ ಬರಲೂ ।
ಚದುರಾ ಅಳಿಗಿರಿ ರಾಯಾ ವಿಜಯವಿಠಲರೇಯಾ ।
ಮಧುರಾಪುರದ ಸೌಂದರ್ಯ ಪುರುಷಪುಣ್ಯಾತ್ಮಾ ೫

## ಅಟ್ಟತಾಳ

ಕೃತು ಮಾಲಾವಾದಾಳು ಪಿತಾಮಹಾ ನೋಡಲು ।
ಅತಿಶಯದಲಿ ವೇಗವತಿ ಎನಿಸಿಕೊಂಡು ।
ಕ್ಷಿತಿಯೊಳೊಬ್ಬಾ ಮಂದಮತಿ ಬಂದು ಸೇವಿಸೆ ।
ಚತುರಾರ್ಥ ಸುಲಭ ಭಕುತಿಯಿಂದ ಮಾಡಲು ।
ಪ್ರತಿಗಾಣೆಯಲ್ಲಿ ಭರತಖಂಡದೊಳದಿಕ್ಕೆ ।
ಶ್ರುತಿ ರಾಮಾಯಣಾ ಭಾರತ ಪಂಚರಾತ್ರಾಗಮಾ ।
ತತಿಯೊಳರಿದಾರು ಮತಿವಂತಾರಿಗರಿದೂ ।
ಗತಿ ಪ್ರದಾಯಕ ಸುರತತಿಪಾಲಕ ದಿತಿ ।
ಸುತ ವೃಷಭಾಸುರಹತ ಅಳಗಿರಿವಾಸ ।
ಪತಿತಪಾವನ ಸಿರಿ ವಿಜಯವಿಠಲರೇಯಾ ।
ಸತತ ಸೌಂದರ್ಯ ಮೂರುತಿ ಎನಿಸುವ ನಾಮಾ ೬

## ಆದಿತಾಳ

ವಟಬೀಜಾದಂತೆ ಪುಣ್ಯಾಘಟಿಸೋದು ಇಲ್ಲಿ ಒಂದು ।
ಘಟಿಕಾವಿದ್ದರೆ ಇಂದು ಸಟೆಯಲ್ಲಾ ಶುದ್ಧಾವೆನ್ನಿ ।
ನಿಟಿಲನೇತ್ರನು ಸುರಕಟಕ ಹರುಷಾದಲ್ಲಿ ।
ನಟನೆ ಮಾಡುತ್ತ ಸ್ತವ ಪಠಿಸುತ್ತ ಪಾಡುವರೂ ।
ಪಟುತರವಾಗಿ ಜ್ಞಾನಕುಟಿಲರಹಿತದಿಂದ ।

ಧಿಟ್ಟ ಅಳಗಿರಿ ಮಧುರಾ ಪುಟಾಭೇದನಿ ನಿವಾಸ ।
ವಟಪತ್ರಶಾಯಿ ವಿಜಯವಿಠಲನ್ನಾ ನಾಮರಸಾ ।
ತ್ರುಟಿಯಾದರೂ ಬಿಡದೆ ಗುಟುಗುಟು ಸವಿದುಂಡು ।
ಕಠಿಣ ಪದವೀಯ ಸಂಕಟ ಒದಯ ಸುಖಿಯಾಗೀ ೭

### ಜತೆ

ಮೂರುಯೋಜನಾ ಕ್ಷೇತ್ರಯಾತ್ರಿ ಮುದದಿಂದ ಮಾಡುವುದು ।
ಚೋರಾರ ಗುರು ವಿಜಯವಿಠಲಾ ತಿರ್ಮಲ ಒಲಿವಾ ೮

## ೮೫. ಮನ್ನಾರ್

### ಧ್ರುವತಾಳ

ಬಾಲಾ ಗೋಪಾಲ ಗುಣಶೀಲಾ ವಿಶಾಲ ಮಹಿಮಾ ।
ಕಾಲಾ ದೇಶತಃ ಪೂರ್ಣ ನೀಲವರ್ಣಕಾಳಿಂಗಮದಭಂಗ ।
ಕಾಳಿಂದಿಯಾ ರಮಣ ಮೂಲಾವತಾರಾಭೇದ ।
ಲೀಲಾ ವಿನೋದ ಏಳೇಳು ಲೋಕವ ಆಳುವ ಬಲುದೈವ ।
ಪಾಲು ಮೊಸರು ಕದ್ದ ಲಾಲಾಸುರಿವ ಶುದ್ಧ ।
ಆಳಿನ ಮನೋರಥ ಫಾಲಲೋಚನ ವಿನುತ ।
ಬಾಲೆರ ಮಾನಭಂಗ ಮೌಳಿ ಮುಕುಟ ತುಂಗ ।
ಲೋಲ ಮನ್ನಾರಿಗುಡಿ ಪಾಲಾ ವಿಜಯವಿಠಲಾ ।
ಸೋಳಾಸಾಸಿರ ವಾಮಲೋಚನೇಶ ಪ್ರೀಯಾ ೧

### ಮಟ್ಟತಾಳ

ಅರಿಧರ ಶಿರಿಧರ । ಧರಾಧರ ಗಿರಿಧರ ।
ಸುರಹರ ಸುರವರ । ಮುರಹರ ನರವರ ।
ಕರಿವರತ್ವರಾತ್ವರ । ವಿಜಯವಿಠಲ ಪೀತಾಂ ।
ಬರದಂಬರ ಧರ । ನಿರುತರ ಪರಿಪೂರ್ಣ ।
ಶಿರಿಮನ್ನಾರಾದಾ । ವರನಿಲಯಾ ಕೃಷ್ಣಾ ೨

## ತ್ರಿವಿಡಿತಾಳ

ಋಷಿ ಹರಿತಾನೆಂಬಾಂಗಿರಸ ಕುಲದುದಭವಾ ।
ವಸುಧಿಯನು ಶೋಧಿಸಿ ಕೊಳು[ತ] ।
ಹಸನಾದ ನೆಲವೆ ಕಾಣಿಸದೆ ಇರಲುತಾ ।
ಪಸಿಗಾನು ಬಂದಿಲ್ಲಿ ನಸುನಗುತ ।
ವಸುದೇವ ಸುತನ ಮೆಚ್ಚಿಸುವೆನೆಂದು ಮನಸು ।
ವಶಮಾಡಿಕೊಂಡು ರಚಿಸಿದನು ತಪವನು [ತ] ।
ವಸುಮತೀಶ್ವರ ನಮ್ಮ ವಿಜಯವಿಠಲನಾ ಸ್ಮ ।
ರಿಸುತಲೀ ಪರಿಯಾ ದಿವಸ ಕಳೆಯುತಿರೆ ೩

## ಮಟ್ಟತಾಳ

ಮನ್ಯು ಅಧಿಕವಾದ ಮನ್ನಾಸುರ ದೈತ್ಯ ।
ತನ್ನೆದುರಿಲಿ ಒಬ್ಬರನ್ನು ಕಾಣೆನೆಂದೂ ।
ಉನ್ಮತ್ತದಿಂದ ಸನ್ನು ಮುನಿಯ ತಪ ।
ವನ್ನೆ ಕೆಡಿಸಲಾಗಿ ಖಿನ್ನಮನಿಸಿನಲ್ಲಿ ।
ತನ್ನೊಳು ತಾನೆ ಕಾವನ್ನನಯ್ಯನ ಪಾದ ।
ವನ್ನು ನೆನಿಸಲು ಸನ್ನಿಧಿಯಾದನು ।
ಅನ್ನಾಥರೊಡಿಯಾ ವಿಜಯವಿಠಲನು ಬಂದು ।
ಮನ್ನಿಸಿದನು ಋಷಿ ಅನ್ನವಾದವನು ೪

## ಆದಿತಾಳ

ಮರುಳ ಮನ್ನಾಸುರನ । ಒರೆಸಿ ಮುನಿಯ ಕಾಯ್ದು ।
ಹರಿಪೆಸರಾದ ಮನ್ನಾರಿ । ಕೃಷ್ಣನೆಂದು ಇಲ್ಲಿ ।
ಕರಿಸಿಕೊಂಡು ಮೆರದನು । ತರುಣೇರಸಹಿತದಲ್ಲಿ ।
ಹರಿದ್ರಾ ನದಿಯೊಳು । ಪರಿಪರಿ ಲೀಲೆ ಅ ।
ಪರಿಮಿತವಾಗಿ ಆಡಿ ಸುರರು ಭೂಸುರರಿಂದ ।
ಹಿರಿದು ಸೇವೆಕೊಳುತ್ತ ಧರಿಗೆ ದಕ್ಷಿಣದ್ವಾರಾಕಾಪುರವೆಂದೆನಿಸಿದೆ ।

ಸರಿಯಾರು ನಿನಗೆ ಸುರತರುವೆ ಕಿಂಕರರಿಗೆ ।
ಕರುಣಿ ಮನ್ನಾರಿ ಗುಡಿ ವರರಾಜಗೋಪಾಲಾ ।
ಮರವಿಭುವ ವಿಜಯವಿಠಲಾ ಅರಿದವರೊಡನಿಪ್ಪ ೫

### ಜತೆ

ಮಾವಾರಿ ಮನ್ನಾರಿ ನಿಲಯಾ ರಾಜಗೋಪಾಲ ।
ಗೋವಋುಷಿಗೆ ಒಲಿದ ವಿಜಯವಿಠಲರೇಯಾ ೬

## ೮೬. ಮಹಾನಂದಿ

### ಧ್ರುವತಾಳ

ಮಹಾ ನಂದಿನಿ ಕ್ಷೇತ್ರ ಮಹಿಯೊಳು ಪ್ರತಿಗಾಣೆ ।
ಅಹಿಪತಿ ವರ್ಣಿಸಲಾರನಯ್ಯಾ ।
ಮಹ ಪುರುಷಾರ್ಥ ಪರ ಇಹದಲ್ಲಿ ಸಿದ್ಧ ।
ಅಹಿಭೂಷಣನಿಲ್ಲಿ ನಲಿಯುತಿದ್ದ ।
ಅಹಂಕಾರವನಿಳಿದು ವಿಹಿತದಿಂದಲಿ ಯಾತ್ರಿ ।
ರಹಸ್ಯದಲ್ಲಿ ಮಾಡಿದ ನರಗೆ ।
ದೇಹ ನಿರ್ಮಳ ಪಂಚದ್ರೋಹಗಳೊಡೋವು ।
ಶ್ರೀ ಹರಿ ದಯದಿಂದ ಪಾಲಿಸುವ ।
ಮಹಯಜ್ಞನಾಮ ವಿಜಯವಿಠಲನ ದಾ ।
ಸೋಹಂನಾಗದತಿ ಫಲವಾಹದೆ ಮರುಳ ೧

### ಮಟ್ಟತಾಳ

ಶಿಲವೆಂಬೋವಿಪ್ರಾ ಬಲುಕಾಲಾದಲಿ ।
ಒಲಿದು ತಪವಮಾಡಿ ಪುಲಿದೊಗಲಾಂಬರನಾ ।
ಒಲಿಸಿ ಮಕ್ಕಳ ಪಡೆದ ಬಲವಂತರೀರ್ವರನು ।
ಇಳಿಯೊಳ 'ಪೆಸರಾದಾ' ಬಲವಂತ ಮಹಕರ್ಮ ವಿಜಯವಿಠಲನ್ನಾ ।
ಒಲುಮೆಯಿಂದಲಿ ಕ್ಷೇತ್ರಾಪೊಳೆವುದು ನಿತ್ಯದಲಿ ೨

### ತ್ರಿವಿಡಿತಾಳ

ನಂದನರಾದರು ಸಿಲನೆಂಬೊ ಭೂಸುರಗೆ ।
ನಂದನಾಪರ್ವತರೆಂಬೊರಿಬ್ಬರು ಮಹಾ ।
ನಂದಾದಿಂದಲಿ ತಪವ ಮಾಡಾಲು ಪರ್ವತ ।
ನೆಂದೆಂಬುವನು ಪೋಗಿ ಶ್ರೀಗಿರಿಯಲಿ ನಿಂತ ।
ನಂದನನೆಂಬವ ಮನಸು ಧೃಡವಾಗಿ ।
ನಂದಾನಲ್ಲಿಗೆ ಬರಬೇಕೆಂದಪೇಕ್ಷಿಸಿ ।
ಒಂದೆ ಭಕುತಿಯಲ್ಲಿ ತಪವನ್ನು ಮಾಡಲು ।
ಕಂದರ್ಪಪಿತ ಮಹಶಕುತಿ ವಿಜಯವಿಠಲ ।
ನಂದಾ ಮೂರುತಿಯಾ ಕೃಪೆಯಿಂದವಾಯಿತು ಸಾಧ್ಯ ೩

### ಅಟ್ಟತಾಳ

ಭೂಸುರನೆಸಗಿದ ತಪಸಿಗೆ ಬಲುಮೆಚ್ಚಿ ।
ಕಾಶಿಯಲಿದ್ದ ಉತ್ತರವಾಹಿನಿ ವಾರ ।
ಣಾಸಿ ಗಂಗೆ ಮಧ್ಯ ಬೊಮ್ಮನಾಳದಿಂದ ।
ತಾ ಸುಲಭಾದಲ್ಲಿ ಗುಪ್ತಗಾಮಿನಿಯಾಗಿ ।
ಶೇಷಪರ್ವತಕೆ ಬಂದಳು ವಿನಯಾದಿಂದ ।
ವಾಸರ ನಾಲ್ವತ್ತರೊಳಗೆ ಕೃಷ್ಣಭವ ।
ನಾಸಿಮಿಕ್ಕಾದ ಪಂಚತೀರ್ಥವೊಡಗೂಡಿ ।
ದೋಷವರ್ಜಿತ ಸಿರಿ ವಿಜಯವಿಠಲನ ಪಾ ।
ದಾ ಸಲೀಲಲ್ಲಾದೆ ಅನ್ಯತ್ರವಿಲ್ಲಾ ೪

### ಆದಿತಾಳ

ಅಂದಿನಾರಭ್ಯವಾಗಿ ವೃಂದಾರಕಾ ಸರ್ವಸಿದ್ಧ ।
ಗಂಧರ್ವರೆಲ್ಲ ನಾರಿ ವೃಂದಗಳು ನಿತ್ಯ ನಿತ್ಯ ।
ಬಂದು ರಾತ್ರಿಯಲ್ಲಿ ಪರಮಾನಂದದ ಲೀಲೆಯಾಡುತ್ತ ।
ಇಂದುಧರಾ ಸಹಿತಾ ಗೋವಿಂದನಾ ಧ್ಯಾನದಲ್ಲಿ ।
ಅಂದು ಮೊದಲಾಗಿ ಮಹಾನಂದಿನಿ ಪೆಸರಿನಿಂದ ।

### ತ್ರಿವಿಡಿತಾಳ

ಹಿಂದೆ ಬೊಮ್ಮನ ಸಿರ ಇಂದು ಶೇಖರನಿಗೆ ।
ಬಂದು ಬಿಡದಿರಲು ಬಂದು ವ್ಯಾಕುಲದಿಂದ ।
ಇಂದಿರಾಪತಿ ರಾಮಾಚಂದ್ರನ್ನ ಪಾದಾರ ।
ವಿಂದ ತುತಿಸಿ ದೇವ ಅಂದು ಒಲಿದು ಇತ್ತ ।
ಅಂದ ಭಾಷಿಗೆ ಹರಿಗೋವಿಂದ ಜನಸಿ, ದಶ ।
ಕಂಧರಾದಿಯಾ ಕೊಂದು ಸಿಂಧು ತಡೆಯಲ್ಲಿ ।
ಅಂಧಕ ರಿಪುವಿನ ಕಂದನಂತೆ ಮನ್ನಿಸಿ ।
ದಂಡದಲ್ಲಿ ರಾಮಚಂದ್ರ ಈಶನ ಸ್ಥಾಪಿಸಿ ।
ಬಂದ ಬೊಮ್ಮ ಹತ್ಯಕ್ಕೆ ಒಂದು ಪಥವ ತೋರಿ ।
ಸಿಂಧುವಿನಲಿ ಸೇತೂ ಬಂಧನದಲಿ ಶಿವ ।
ನಿಂದರೆ ದೋಷವು ಹಿಂದಾಗುವದೆಂದು ।
ಗಂಧ ಮಾದನಾದ್ರಿವಾಸ ವಿಜಯವಿಠಲ ।
ಮಂದಗತಿಗಳಿಗೆ ಪರನೆಂದು ಶಿವತೋರಿದಾ ೫

### ಅಟ್ಟತಾಳ

ರಾಮನೆ ಬಂದು ಸಂಚರಿಸಿದ ಕಾರಣ ।
ರಾಮೇಶ್ವರವೆಂಬೊ ನಾಮದಿಂದೀ ಕ್ಷೇತ್ರ ।
ಭೂಮಿಯೊಳಗೆ ಪ್ರಕಾಶಿತವಾಯಿತು ।
ಈ ಮಹೋದಧಿ ಸದಾ ಪವಿತ್ರವೆನಿಸಿತು ।
ಆ ಮಹ ಚತುರ ವಿಂಶತಿ ತೀರ್ಥಂಗಳೂ ।
ಕಾಮಿತಾರ್ಥವನಿತ್ತು ಸಲಹುತಲಿಪ್ಪವು ।
ರಾಮನೆ ವಿಜಯವಿಠಲ ಪರದೈವ, ನಿ ।
ಸ್ಸೀಮ ಕೋದಂಡ ದೀಕ್ಷಾಗುರು ಗುಣನಿಧಿ ೬

### ಆದಿತಾಳ

ಕೋತಿಗಳಿಂದಲಿ ರಘುನಾಥ ಗಿರಿಗಳ ತರಿಸಿ ।
ಸೇತು ಲಂಕೆಗೆ ಬಿಗಿಸಿ ಖ್ಯಾತನಾದಾ ಜಗದೊಳಗೆ ।

ಪೂತೂರೆ ಈತನ ಮಹಿಮೆ ।
ಭೂತನಾಥ ಕಾಣಲರಿಯ ದ್ವೈತಮತದವರಿಗೆ ।
ಪ್ರೀತಿಯಹುದು ಮಾಯಿಗೇನೊ ।
ಸೇತು ಮಾಧವರಾಮಾ ವಿಜಯವಿಠಲರೇಯಾ ।
ಸೇತುಯಾತ್ರೆ ಮಾಡಿದವರಾವಾತನಿಂದ ಪಾಲಿಸುವಾ ೭

### ಜತೆ

ಏನು ಸೋಜಿಗವೊ ಸೇತು ಮಹಾತ್ಮೆಯನ್ನು ।
ದ್ಯುನಾಥ ಎಣಿಸುವ ವಿಜಯವಿಠಲನಿಂದ ೮

## ೮೮. ರಾಮೇಶ್ವರ

### ಧ್ರುವತಾಳ

ಚಿತ್ರವಿದೇನೊ ಶತಪತ್ರ ನಯನ ಪಾ ।
ವಿತ್ರನಾಮಕ ಶ್ರೀ ಕಳತ್ರ ಮುನಿಸ್ತೋತ್ರ ।
ಸೂತ್ರಧಾರಕ ಲೋಕತ್ರಯವಂದಿತ ।
ಪಾತ್ರರಿಗೆ ಸತ್ಪಾತ್ರ ತ್ರಿದಶಮಿತ್ರ ।
ಶತ್ರುಸಂಹಾರ ವೀತಿಹೋತ್ರ ।
ನೇತ್ರ ಪ್ರತಿಷ್ಟ ಛತ್ರಗದಾದಿ (ಹಸ್ತಾ)ಂದ ಪರ ।
ಮಿತ್ರಪ್ರಕಾಶ ಶ್ವೇತ ಗಾತ್ರ ಮಾಧವಸೇತು ।
ಕ್ಷೇತ್ರದಧಿಪತಿ ಧಾತ್ರಿಶಾ ವಿಜಯವಿಠಲರೇಯಾ ಸಾ ।
ವರ್ತ್ರರ ಮನೋಹರ ಸುತ್ರಮವಂದ್ಯ ೧

### ಮಟ್ಟತಾಳ

ಜಗದೇವನ ನೀನೆ ಜಗವಮೋಹಿಸುವಾನೆ ।
ಯುಗಳ ಚರಣಕ್ಕೆ ನಿಗಳ ಹಾಕಿಸಿಕೊಂಡಬಗೆ ಮತ್ತಾವದು ।
ಅಗಣಿತ ಹರಬೊಮ್ಮಾದಿಗಳನು ಪಾಶದಲಿ ।
ನಗುತ ನಗುತಲಿದ್ದು ಬಿಗಿದುಕಟ್ಟುವ ಚ ।

ನ್ನಿಗ ಬಲು ಚಪ್ಪಳಿಗನೆ ಅಘಹರ ವಿಜಯವಿಠಲ ಶೇತು ಮಾಧವ ।
ರಘುಕುಲದಲಿ ಬಂದು ಮಗನಾದ ದೈವ ೨

### ತ್ರಿವಿಡಿತಾಳ

ಮಧುರಿಯಲ್ಲಿ ಪುಣ್ಯನಿಧಿ ಎಂಬೊ ಭೂಪತಿ ।
ಉರಿಸಿ ಈ ದೇಶವ ಒದಗಿ ಆಳುತಲಿರಲು ।
ಉದರದಲಿ ಸಂತಾನದುದಭವ ಕಾಣದೆ ।
ಮುದದಿಂದಲಿ ಚಿಂತಾ ಉದಧಿಯೊಳಗೆ ಮುಳುಗೆ ।
ಬದಿಯಲ್ಲಿದ್ದ ಸಾರಹೃದಯರು ತಿಳಿದು, ಪೇ ।
ಳಿದರು ಈಸು ಸಂಗತಿಯಾ ಸುದತಿಯಳ ಸಹಿತ ।
ಅದನರಿದರಸು ಬಂದೊದಗಿ ಗಂಧ ಮಾಧವ ।
ಬದಿಯಲ್ಲಿ ಸೇರಲು ಪದೊಪದಿಗೆ ಲವಣ ।
ಉದಧಿ ತೀರದಲ್ಲಿ ಸಿರಿ ಮದನನಯನ ನೆನಸುತ ।
ಸುಧಾ ಸೇತುಮಾಧವ ವಿಜಯವಿಠಲ ನೆನಿ ।
ಸಿದ ಕಾಮ್ಯರ್ಥವನೀವ ಮದಗರ್ವವನ ದಾವ ೩

### ಅಟ್ಟತಾಳ

ಶಪಥವನಾಡಿ ಸಮೀಪದಲಿ ನಿಲ್ಲಾದೆ ।
ನೃಪತಿಗೆ ಮಗಳಾದಳಪರಿಮಿತೆ ಬಂದು ।
ತಪವೆ ಸಿದ್ಧಿಸಿತೆಂದು ನೃಪವಿಂದ್ಯಾವಳಿಗಿ ।
ಕೃಪೆಯಿಂದರುಹಲು ಉಪಚರಿಸಿದಳಂದೂ ।
ಗುಪಿತ ಸೇತು ಮಾಧವ ವಿಜಯವಿಠಲ ।
ಕೃಪಣ ವತ್ಸಲ ಬಂದ ಕಪಟ ಭೂಸುರನಾಗಿ ೪

### ಆದಿತಾಳ

ನಂದವನದಲ್ಲಿ ದೇವಿ ಇಂದಿರೆ ಸುಖಸುತಿರೆ ।
ಮುಂದಿಳಿಯಾದಂತೆ ಪೋಗಿ ।
ಇಂದಿರೇಶಾ ನೃಪತಿಯಾ ।

ನಂದನಿಯಾ ಕರವ ಪಿಡಿಯೆ ।
ಸಂದೋಹವೆಲ್ಲಾ ನೀಡಿ ತಂದು ನಿನ್ನ ಕಾಲಗಳಿಗೆ ।
ಬಂಧಿಸಿದರು ನಿಗಳಾ ।
ಅಂದು ಮೊದಲಾಗಿ ಇಲ್ಲಿ ।
ನಿಂದು ಪುಣ್ಯನಿಧಿಗೆ ಒಲಿದು ।
ವಂದಿಸಿದವರಿಗೆ ಬೇಕೆಂದು ಪಾಲಿಸುವೆ ಬಿಡದೆ ।
ಇಂದುಧರ ವಂದ್ಯಾ ಸೇತು ಬಂಧ ಮಾಧವನೆ ।
ತಂದೆ ವಿಜಯವಿಠಲ ಸಂಬಂಧಿಗನೆ ಭಕ್ತರಿಗೆ ೫

## ಜತೆ

ಕಂಡಮಾತುರದಲ್ಲಿ ಭವದ ಶೃಂಖಳವನ್ನು ।
ಖಂಡ್ರಿಸುವ ಸೇತು ವಿಜಯವಿಠಲ ಮಾಧವ ೬

# ೮೯. ರಾಮೇಶ್ವರ

## ಧ್ರುವತಾಳ

ಸೀತಾರಾಮನು ಬಂದು ಸೇತು ಬಂಧಿಸಿ ಖಳರಾ ।
ಕೋತಿಗಳಿಂದಲಿ ಘಾತಮಾಡಿಸಿ ।
ಪಾತಕ ರಾವಣನ್ನ ಯಾತನಿಗೆ ಕಳುಹಿ ।
ಚಾತುರ್ಯದಲ್ಲಿ ಸುರವ್ರಾತವನು ಪಾಲಿಸಿ ।
ಭೂತನಾಥನ ಇಲ್ಲಿ ಪ್ರೀತಿಯಿಂದ ಪ್ರತಿಷ್ಟಿ ।
ಸಿ ತಾನು ಪೆಸರಾದ ಭೂತಳದೊಳಗೆಲ್ಲ ಭೂತ ಪ್ರಮಥ ।
ಮಥ ಪೇತಾವೃತಗಳಿಂದ ಜಾತವೇದಸನ ಮನ ।
ಭೂತಳಾಧಿಪ ರಘುನಾಥನ ಚರಣಾಂಬುಜ ।
ತಾ ತುತಿಸುತಿರೆ ಪೀತಾಂಬರ ಧರ ಶ್ರೀ ವಿಜಯವಿಠಲರೇಯಾ ೧

## ಮಟ್ಟತಾಳ

ಸೇತು ಮಧ್ಯದಲಿ ಒಪ್ಪುತಾ ಪೊಳೆದನಾಗ ।
ಮಾಧವನು ಗಂಧ ಮಾಧನಗಿರಿಯಲ್ಲಿ ।

ವೇದಗಳು ತುತಿಸೆ ವೇಧನು ಕೊಂಡಾಡೆ ।
ವೇದ ಪುರುಷಾ ಲವಣೋದಧಿ ಮಧ್ಯದಲ್ಲಿ ।
ಸಾಧುಸಜ್ಜನರೊಡನೆ ಮೋದವಾಲಗವಾದನು ಹರುಷದಲಿ ।
ಶ್ರೀದೇವಿಯರಸಾ ವಿಜಯವಿಠಲ ರಾಮಾ ।
ಕ್ರೋಧರಸದೆ ಒಡೆದು ತ್ರಿಧರೆಯೊಳು ಮೆರೆದಾ ೨

## ರೂಪಕತಾಳ

ಈ ಪರಿಯಲಿ ವಾಲಗ ಪರಮಪುರುಷ ।
ಆ ಪಾರ ಬಗೆಯಲಿ ತಾ ಪ್ರೀತನಾಗಿರೆ ।
ಆ ಪತ್ತಿಗೆ ಬಂದು ಶರಣೆಂದು ಮೊರೆಹೊಕ್ಕ ।
ಆ ಪನ್ನ ವಿಭೀಷಣಾ ಕರವನ್ನು ಮಗುಚಿ ।
ಭೂಪಾರಾ ಶಿರೋರತುನ ಬಿನ್ನಹಾ ಕೇಳೆಂದು ।
ಪಾಪರಹಿತ ಭಕ್ತ ಪೊಗಳಿದನೂ ।
ಶ್ರೀಪತಿ ರಘುರಾಮಾ ನೀ ಸೇತು ಉಳುಹಿದರೆ ।
ಆ ಪತ್ತ ಅಡರುವದು ಧರಿಗೆನಲೂ ।
ಚಾಪಧರಾಗ್ರಣಿ ವಿಜಯವಿಠಲ ಲಂಕಾ ।
ದ್ವೀಪ ಪತಿಯಾ ಮಾತನ್ನು ಪಾಲಿಸಿದನು ೩

## ಝಂಪೆತಾಳ

ಸೇತುವಿನ ಛೇದಿಸಿ ಮೂರು ಭಾಗವ ಮಾಡಿ ।
ಸೇತು ಮಾಡಿದನು ಸುರನರದಾನವ ।
ವ್ರಾತಗಳು ಮಿಂದು ಕೃತಾರ್ಥನಾಗುವದಕ್ಕೆ ।
ಸೀತಾರಾಮನು ಬಲು ಪ್ರೀತಿಯಲ್ಲಿ ।
ಪ್ರಾತರಾ ಮಧ್ಯಾನ್ಹಾ ಸಾಯಂಕಾಲದ ಕಾಲಾ ।
ಶೀತಾಗಗೊಡದೆ ಬಲು ಭಕುತಿಯಲ್ಲೀ ।
ಜಾತ ಉತ್ತಮರೆಲ್ಲಿ ನಿತ್ಯನೈಮಿತ್ಯಗಳು ।
ಶಾತದಲ್ಲಿ ಮಾಡಲು ಸರ್ವೋತ್ತುಮಾ ।

ವಾತ ನಿಜಗುರು ರಘುನಾಥ ವಿಜಯವಿಠಲಾ ।
ಸೇತುಯಾತ್ರಿಗೆ ಬರಲು ಪ್ರೀತಿಮಾಡುವನು ೪

### ತ್ರಿವಿಡಿತಾಳ

ರತುನಾಕಾರ ಮಹೋದಧಿ ಸಂಗಮದಲಿ (ಅಪರಿ) ಅಪಾರ ।
ವಿತವಲ್ಲಿ ಮುಖ್ಯರು ವಾಯುಜನ ಸ ।
ಹಿತಾ ಕೃತೆನುತೆ ಲಕುಮಿ ಎಂದೆನಿಸುವ ವೈದೇಹಿ ।
ರತಿ ಪತಿ ಪಿತ ನಾರಾಯಣನೆ ರಾಮಾ ।
ಅತಿಶಯದಿಂದ ತೀರಥದೊಳು ಸನ್ನಿಧ ।
ಪ್ರತಿದಿನದಲಿ ಬಿಡದೆ ಇರುತಿಪ್ಪರು ।
ಹಿತದಿಂದ ನಿಂದು ವಂದನೆ ಗೈದವರಿಗೆ ।
ಮತಿಯಾಗುವದು ಸೌಭಾಗ್ಯ ಮ್ಯಾಲೆ ।
ಗತಿಯಾಗುವದಿದಕೆ ಸಂಶಯ ಲೇಶವಿಲ್ಲ ।
ಚತುರಾತರು ಕೇಳಿ ಸಂತೋಷರಾಗಿ ।
ಸತುದ್ಯೆವ ರಾಘವ ವಿಜಯವಿಠಲರೇಯಾ ।
ಪತಿಯಾಗಿಪ್ಪನು ಇಲ್ಲಿ ಪಿತಮಹಾದ್ಯರಿಗೆಲ್ಲಾ ೫

### ಅಟ್ಟತಾಳ

ಹತ್ತು ಸಾವಿರ ವಿಪ್ರವಧೆ ಕನಕಸ್ತೇ[ಯ] ।
ಮತ್ತೆ ಇದರಷ್ಟು ಸುರಾಪಾನಾ ಗುರುತಲ್ಪಾ ।
ಇತ್ತಂಡಾದಲಿ ಸಂಸರ್ಗಿಕೋಟಿ ಇರೆ ।
ಎತ್ತಲಾದರು ಏನು ನರರು ಒಮ್ಮೆ ಬಂದು ।
ಚಿತ್ತಶುದ್ಧನಾಗಿ ನಿಂದು ತುತಿಸಿದಾರು ।
ಸೋತ್ತುಮನಾಗುವ ಸರ್ವಕಾಲದಲ್ಲಿ ।
ಕತ್ತತಿ ಹರ ನಮ್ಮ ವಿಜಯವಿಠಲ ದೇ ।
ವೋತ್ತುಮಾನೊಲಿದು ಮುಕ್ತಿಯನೀವನು ೬

### ಆದಿತಾಳ

ಪುಸಿ ಎನ್ನದಿರಿ ಧನುಸುಕೋಟೆ ಮಹಿಮೆ ಪ ।
ರಿಸಿ ಕೇಳಿದವಗೆ ಲಾಲಿಸಿ ಪೇಳಿದವಗೆ ।

ವಿಷಯಾದಿಗಳ ಮಹಾಪ್ರಸರವಳಿದು ಯಮನ ।
ಘಾಸಣಿಗೆ ತಪ್ಪಿಸಿ ಗತಿಗೇರಿಸುವುದು ಶುಭದಿಂದ ।
ವಸುಧಿಯೊಳಾವ ಮಾನಿಸನಾದರು ಸೇ ।
ವಿಸಿದರು ಪುಣ್ಯ ಸಿದ್ಧಿಸುವ ು ವೇಗದಲ್ಲಿ ।
ಅಸುರ ವಿರೋಧಿ ರಾಮಾ ವಿಜಯವಿಠಲರೇಯ ।
ಪೆಸರಾದ ಸೇತು ಬಂಧಿಸಿ ಶ್ರುತಿ ಸ್ಮೃತಿಯೊಳು ೭

### ಜತೆ

ಮೊದಲು ನರರು, ಮಧ್ಯಾದೇವಾಂತ್ಯದನು ಜರುತ್ರಿ ।
ವಿ[ಧ]ಮಾಡಿದ ರಾಮಾ ವಿಜಯವಿಠಲನೊಲಿದು ೮

## ೯೦. ವಲ್ಕಲ

### ಧ್ರುವತಾಳ

ಅರ್ಥಮನ[ವೀ]ಯಾದಿರು ಬಿದ್ದೆ ನಿನ್ನ ಪಾವಕ್ಕೆ ।
ಉದ್ಧರಿಪುದು ಸಮುದ್ರ ಶಯ್ಯಾ ।
ಹದ್ದು ಹಾವಿಗೆ ಹರಿದೆದ್ದು ಕವಿದಂತೆ ।
ಕೃದ್ಧಾಗಳಿಂದಲಿ ಪೊಂದಿಪ್ಪನೊ ।
ಒದ್ದು ಕಡಿಗೆ ನೂಕೊ ಸದ್ದಡಗಿಸಿ ಖಳರ ।
ಸದ್ದಾಗದಂತೆ ಒಳಗೆ ತಿದ್ದಿಡುವುದು ।
ಶುದ್ಧ ಸ್ವಭಾವ ನಮ್ಮ ವಿಜಯವಿಠಲ ಜ ।
ನಾರ್ಧನ ರಕ್ಷಣ ಅಬ್ಧಿನಿವಾಸ ೧

### ಮಟ್ಟತಾಳ

ಒಂದು ದಿನದಲಜನು ಚಂದದಿಂದಲಿ ಆ ।
ನಂದ ವೈಜಯಂತಿ ಎಂದೆಂಬೊ ಸಭೆಯಲ್ಲಿ ।
ವೃಂದಾರಕ ಸಿದ್ಧಗಂಧರ್ವ ಸರ್ವ ।
ಸಂದಣಿಯಲ್ಲಿ ನವನಂದನರ ಸಹಿತ ।

ಅಂದು ವಾಲಗವಾಗೆ ಮಂದಹಾಸದಲಿನಾ ।
ರಂದ ಮುನಿಪ ನಡೆತಂದನು ಎದುರಾಗಿ ।
ಇಂದಿರಾಪತಿ ಗೋವಿಂದ ವಿಜಯ ವಿಠ ।
ಲಂದಾಗಿರುತಿರಲು ಬಂದನು ಪಾಡುತಲಿ ।
ಬಂದು ಜನಾರ್ಧನನ ಮಂದರದಲಿ ನುಡಿಸಿ ೨

## ರೂಪಕತಾಳ

ಬರಲು ನಾರದಮುನಿ ಪರಮೇಷ್ಠಿ ಆತ್ಮಜನ ।
ನೆರವಾಗಿ ಬರುತಿಪ್ಪ ಹರಿಮೂರುತಿಯ ನೋಡಿ ।
ಸರಸರನೆ ಎದ್ದು ನಿಂದರಲಾಗಿ ನವಪ್ರಜೆ ।
ಶ್ವರರು ಹಾಸ್ಯವಮಾಡೆ ಹರಿದು ಶಾಪಿಸಿ ನೀವು ।
ನರರಾಗಿ ಪುಟ್ಟಿ ಸಂಚರಿಸು ಎಂದೆನಲಾಗಿ ।
ಮ[ರು]ಗಿ ತಮ್ಮೊಳಗೆ ತತ್ತರಿಸೀದವರಾಗ ।
ಸುರಪಾಲ ವಿಜಯವಿಠಲ ಜನಾರ್ಧನನೆಂಬೊ ।
ಸುರಮುನಿಯಾ ಕೊಂಡಾಡಿ ವರದಾರೀವಾರ್ತಿ ೩

## ಝಂಪೆತಾಳ

ಕೇಳಿ ಕೌತುಕವೆಂದು ತಲೆದೂಗಿ ಹರಿಲೀಲೆಗೆ ।
ಪೇಳಲಾರಳವೆ ಶೃತಿವಚನದಿಂದ ।
ಭೂಲೋಕದಲಿ ಪರಶು ರಾಮಕ್ಷೇತ್ರ ಉಂಟು ।
ವಾಲಯಾಲಿಪ್ಪ ಅಶ್ವತ್ಥದವಲ್ಲೀ ।
ಮೇಲಾದ ಕಣ್ವಮುನಿ ಆಶ್ರೈಸಿ ಇರುತಿಪ್ಪ ।
ಪೇಳುವೆನು ಮನಶುದ್ಧರಾಗಿ ಕೇಳಿ ।
ಅಲಸಾ ಗೈಸದತಿ ಪೋಗಿ ನಿಮ್ಮಯ ಶಾಪ ।
ಬೀಳೂ ಹಾಕುವದಕುಪಾಯವಂದೂ ।
ಶ್ರೀಲೋಲ ವಿಜಯವಿಠಲ ಜನಾರ್ಧನನೆಂದು ।
ಬೀಳುಕೊಟ್ಟನು ನವ ಪ್ರಜೇಸರಿಗೆ ೪

### ತ್ರಿವಿಡಿತಾಳ

ನಾಱುದ ಕೃಪೆಯಿಂದ ಭೈರವಾಸದಜನೀ ।
ವಾರವ ಕೊಡಲಾದರ ಸಂಗಡದಲ್ಲೀ ।
ಶರೀರ ಧರಿಸಿ ಬಂದರು ನಾರವಸನ ।
ಘೋರಾನೆತಂದಿಲ್ಲಿ ಕೇಡಾದದಂದು ಮೊದಲು ।
ಧಾರುಣಿ ಒಳಗೆ ವಲ್ಕಲ ಕ್ಷೇತ್ರವೆಂದಿದು ।
ಕಾರಣವಾಯಿತು ಪಂಚಕ್ರೋಶಾ ।
ಸಾರಸುಂದರ ವಿಜಯವಿಠಲ ಜನಾರ್ಧನ ।
ಮೀರಿದ ದೈವದ ಮಾಯಾವಿನ್ನೆಂತುಂಟೊ ೫

### ಝಂಪೆತಾಳ

ಒಂಭತ್ತುಮಂದಿ ಬ್ರಹ್ಮನ ಮಕ್ಕಳು ಬಂದು ।
ಸಂಭ್ರಮದಲ್ಲಿ ಅಶ್ವತ್ಥವನ್ನೂ ।
ಅಂಬಕಾದಿಂದಲ್ಲಿ ನೀಕ್ಷಿಸಲು ಸ್ವರ್ಣಮಯ ।
ಅಂಬರಕೆ ತುಳುಕುತಿದೆ ಅಲ್ಲಿಗಲ್ಲೀ ।
ಕೊಂಬಿಕೊಂಬಿ ಎಲೆಮೂಲಾಗ್ರ ಪರಿಯಂತ ।
ತುಂಬಿಹರು ಸುರರಾದಿ ತೆರವಿಲ್ಲದೆ ।
ಜಂಬುದ್ವೀಪದೊಳಗೆ ಇದಕೆಣೆ ಇಲ್ಲೆಂದು ।
ಇಂಬು ಮಾಡಿದರದರ ಛಾಯದಲ್ಲೀ ।
ಕಂಬುಧರ ವಿಜಯವಿಠಲ ಜನಾರ್ಧನ ಪರ ।
ನೆಂಬ ಮುನಿಪನು ಬಂದ ಕುಂಭಿಣಿಸುರನಾಗಿ ೬

### ತ್ರಿವಿಡಿತಾಳ

ಪ್ರಜೇಶ್ವರರಿಗೆ ಉಪದೇಶವ ತಿಳುಹಿದ ।
ದ್ವಿಜನಾಗಿ ಬಂದ ನಾರದಮುನಿ ಅಂದೂ ।
ದ್ವಿಜಗಮನನ ಬಳಿಗೆ ಪೋಗಿ ತುತಿಸಿ ಚಕ್ರ ।
ನಿಜವಾಗಿ ಕಳುಹಿ ಚಕ್ರತೀರ್ಥವೆನಿಸಿದ ।

ಭಜಿಸುತ್ತ ಮನದೊಳು ಹರಿಯ ಚರಣವನ್ನು ।
ಅಜನ ಬಳಿಗೆಯ್ದಿದ ಭಾಗವತರಮಣಿ ।
ತ್ರಿಜಗ ಮಧ್ಯದಲೊಂದು ಯಾಗ ಮಾಡುವುದಕ್ಕೆ ।
ರುಜುವಾದ ನೆಲನೆನಗರುಹೆನಲು ।
ಅಜನ ಮಾತನು ಕೇಳಿ ಕರವ ಜೋಡಿಸಿನಿಂದು ।
ಸುಜನರಾಗ್ರಣಿ ಪೇಳಿದನಿದರ ಮಹಿಮಿಯಾ ।
ಗಜವರದಾ ವಿಜಯವಿಠಲ ಶ್ರೀಜನಾರ್ಧನ ।
ಯಜಮಾನನಾಗುವ ಮೇಧದಲ್ಲಿಗೆ ಬಂದೂ ೭

## ಅಟ್ಟತಾಳ

ಹರುಷದಿಂದಲಿ ಬಂದು ಪರಮೇಷ್ಟಿಯಾಗವ ।
ಸುರರಸಹಿತವಾಗಿ ಸರಿಯಿಲ್ಲವಧಾನಾ ।
ಸರಿಯಾದೆ ಕೊಡುತಿರೆ ನಿರುತಾದಲ್ಲಿ ವೈಶ್ವಾ ।
ನರಗೆ ವಖ್ಯಸವಾಗೆ ಪರಿಹಾರಾ ಕಾಣಾದೆ ।
ಭರದಿಂದಲಿ ಅಗ್ನಿ ಹರಿಯಾ ಮೊರೆಯೋಗೆ ।
ಕರುಣಾದಿಂದಲಿ ಕೇಳಿ ಹರಿಬಂದಾ ಬಾಲಾ ಭೂ ।
ಸುರ ವೇಷವನು ತಾಳಿ ಇರಲದೆ ಕ್ಷುದಿ ಪರಿ ।
ಹರಿಸೆಂದು ಗ್ರಾಸವಾ (ನೀಡಿಸುಎನೆ) ತರಿಸಿವಾದರಿಸಿ ।
ಪರಮಸೋಜಿಗವೆಂದು ಸುರಜೇಷ್ಠ ತಲೆದೂಗಿ ।
ಹರಿಮಾಯಾ ವಿಜಯವಿಠಲ ಜನಾರ್ಧನ ।
ಕರುಣಿಯಾ ಮನದಲ್ಲಿ ಸ್ಮರಿಸಿ ಮನ್ನಿಸಿದ ೮

## ಆದಿತಾಳ

ಎಲ್ಲೆ ಓದನರಾಸಿ ಎಲ್ಲೆ ನಾನಾಕರಾಸಿ ।
ಎಲ್ಲೆ ಘೃತದ ಮಡುವು ಎಲ್ಲೆಲ್ಲಿ ಇದ್ದವೆಲ್ಲಾ ।
ಅಲ್ಲಿಗಲ್ಲಿಗೆ ಬಯಲು ನಿಲ್ಲದಡಗಿದವು ।
ಎಲ್ಲಿ ಅದ್ಭೂತವೆಂದು ತಲ್ಲಣಿಸಲು ಇತ್ತಲು ।
ಬಲ್ಲಿದ ದೈವ ಕರದಲ್ಲಿ ಆ ಪೋಷಣಿಯಾ ।

ನಿಲ್ಲದೆ ಪಿಡಿದು ಗ್ರಾಸಾ ।
ಇಲ್ಲಾವೆಂದರೆ ನಾನು ಕೊಳ್ಳತಕ್ಕವನೆಂದು ।
ಸೊಲ್ಲು ಪೇಳಾಲೆಂದು ಅಜನು ।
ಮೆಲ್ಲಾನೆ ತುತಿಸಿ ಸಿರಿವಲ್ಲಭನ ಲೀಲೆ ತಿಳಿದು ।
ನಿಲ್ಲಿಸಿದ ಯಾಗವನು ಇಲ್ಲಿನವ ಪ್ರಜೇಸನು ।
ಪುಲ್ಲನಾಭವೊಲಿಸಿ ವೇಗದಲಿ ಮನುಜ ದೇಹಬಿಟ್ಟು ।
ಸಲ್ಲಿದರು ಪೂರ್ವದಂತೆ ಎಲ್ಲರಿಂದ ಪೂಜೆ ।
ಗೊಳ್ಳುತನ ವಳ್ಳಿತಿದು ಭಾಗೀರಥೀ ।
ಉಳ್ಳ ತಾಮ್ರಪರ್ಣಿಸಲಿಲಾ ।
ಎಲ್ಲಾ ಪ್ರಖ್ಯಾತವಾಗಿಪ್ಪ ।
ಅಲ್ಲಿಗಲ್ಲಿಗೆ ಧರೆ ನರರೂ ।
ಒಲ್ಲೆ ಎನದೇ ಇಂದು ಕ್ಷಾಯದಲ್ಲಿ ಮಿಂದು ಶುದ್ಧನಾಗೆ ।
ಎಲ್ಲ ದೋಷಂಗಳು ಇರದೆ ತಲ್ಲಣಿಸಿ ಪೋಗುವುವು ।
ಖುಲ್ಲರರಿ ಜನಾರ್ಧನ ವಿಜಯವಿಠಲರೇಯಾ ।
ಎಳ್ಳಿನಿತು ಬಿಡದೆ ಸಾರೆ ಗೆಲ್ಲಿಸುವ ಶೋಕದಿಂದ ೯

ಜತೆ

ವಲ್ಕಲಾ ಕ್ಷೇತ್ರದಾ ವಾಸ ಜನಾರ್ಧನ ।
ಬಲವಂತ ವಿಜಯವಿಠಲ ಪಾವಕಪಾಲಾ ೧೦

## ೯೧. ಶುಚೀಂದ್ರ

### ಧ್ರುವತಾಳ

ಯೋಗದಭ್ಯಾಸ[ರಿ]ಗೆ ಜಾಗರ ಉಳ್ಳ ಕ್ಷೇತ್ರ ।
ಆಗಮ ಸಿದ್ಧಾಂತದಲ್ಲಿ ನೋಡಿ ।
ಯೋಗಿ ಜನರು ಇಲ್ಲಿ ಭೋಗದಾಶಿ ತೊರಮಾ ।
ಲಾಗಿಸುವರು ಭವರೋಗ ವನಧಿ ।
ಭೂಗೋಳಾದೊಳಗೋರ್ವ ರಾಗದ್ವೇಷವೇ ಬಿಟ್ಟು ।

ಜಾಗು ಮಾಡಿದಿಲ್ಲಿಗೆ ಸಾಗೀ ಬಂದೂ ।
ಬಾಗಿ ಕೇವಲ ದೃಢವಾಗಿ ಪ್ರಜ್ಞಾತೀರ್ಥದಲ್ಲಿ ।
ತಾಗುಪ್ತದಲ್ಲಿ ಮಿಂದಾಗಲೆ ಕರ್ಮನಾಶ ಭಾಗೀರಥಿ [ನದಿ] ।
ಸಾಗರದಲ್ಲಿಗೆ ಪೋಗಿ ಪುಣ್ಯಾಪಡದೂ ।
ಯಾಗಾದಿಗಳ ಮಾಡಲಾಗಿ ಆವಫಲ ।
ವಾಗುವದದಕೆ ನೂರಾಗುವದು ಸಿದ್ಧ ।
ಮೂ[ಗ]ಣ್ಣನೊಬ್ಬ ಬಲ್ಲ ।
ನಾಗಶಯನ ವಿಜಯವಿಠಲ ಸುಧೀಂದ್ರ ।
ಆಗರಾ ವಾಸನ ನಾಗ ಗಮನ ಭಜಿಸೀ ।
ನೀಗಿಕೊಂಡನು ಬಂದ ಭೋಗ ವ್ಯಾಕುಲಾ ೧

**ಮಟ್ಟತಾಳ**

ಪರಸತಿಗೆ ಅಳು[ಪಿ] ಹರಿಯನುಶಾಪಾ ।
ಧರಿಸಿದನು ತನ್ನ ಶರೀರಾವಾದ್ಯಂತಾ ।
ದುರಿಯೋನಿಯಲ್ಲಿ ಪರಮ ದುಶ್ಚಿತ್ತನಾಗಿ ।
ಥರವಲ್ಲದೇ ಪೋದಾ ವರಸಭಾ ಸ್ಥಾನಕ್ಕೆ ।
ಮರಳೆ ತನ್ನೊಳು ತಾನೇ ಮರುಗಿಕೊಳುತಲಿರೇ ।
ಸುರಮುನಿ ನಾರದನು ಭರದಿಂದಲಿ ಬರಲೂ ।
ಎರಗಿದ ಚರಣಕ್ಕೆ ಕರಗಳನು ಮುಗಿದು ।
ಪರಮಪುರುಷರಂಗ ವಿಜಯವಿಠಲನ್ನ ।
ಶರಣಗೆ ತನ್ನಯಲ್ಲಾ ಬಿನ್ನೈಸೆ ೨

**ರೂಪಕತಾಳ**

ಬೆಸನ ಕೇಳುತಮಾನಿ ನಸುನಗುತಾ ಪರಸತಿಯಾ ।
ಘಸನಿ ಪೋದವನ ಮನ್ನಿಸದಲ್ಲ ಜಗವೆಲ್ಲ ।
ಹಸಗೇಡಿಯಾಗಿ ಸುಮನಸ ತತಿ ಕೇಳಿದ ।
ಕುಶಲಕ್ಕೆ ಉಪಾಯ ಪುಶಿಯದಂತೀಗಾಲ ।
ವಸುಧಿಯೊಳಗೆ ರಂಜಿಸುವ ಮಹೇಂದ್ರಾದ್ರಿ ।

ಪಸರಿಸುತ್ತಾ ಬಲು ಪಸರಾಗಿದೆ ಅತ್ರಿ ।
ಋಷಿ ಆಶ್ರಮಾ ಉಂಟು ।
ಉಸರಿಕ್ಕಾದಲೆ ಪೋಗಿ ।
[ಲೇಸಿನಾ] ಮನದಲ್ಲಿ ಭಜಿಸು ಮಧುಸೂದನನ ।
ಹಸನಾಗಿ ವಿಶಾಪ ವಶದಿಂದ ಕಡಿಬಿದ್ದು ।
ಲಸತು ಕಾಯದಲಿ ಶೋಭಿಸುತಪೋಗು ಎನಲಾಗಿ
ಬಿಸಜನಯನ ನ್ನ ವಿಜಯವಿಠಲನ ನೆ ।
ನೆಸುತ ಬಂದನು ಅತ್ರಿಋಷಿ ಇದ್ದ ಭೂಮಿಗೆ ೩

### ಝಂಪೆತಾಳ

ಬಂದು ಇಂದ್ರನು ತಪಸಿಗೆ ಕುಳಿತನು ಗ ।
ಜೇಂದ್ರನ್ನ ಕರದು ಉದಕವ ತರ ಪೇಳಲು ।
ಅಂದು ಐರಾವತನು ಕೈಕೊಂಡು ಮಲಯಾದ್ರಿ[ಯ] ।
ಲಿಂದ ಪುಟ್ಟಿದ ತಾಂಬ್ರ ಪರ್ಣಿಯದತ್ತ ।
ಲಿಂದ ಮಾರ್ಗವ ಮಾಡಿ ತನ್ನ ಒಡಿಯನಿದ್ದಾ ।
ಮುಂದೆ ಬಿಟ್ಟದು ಬಲು ಭಕುತಿಯಿಂದ ।
ತಂದ ವಿಚಾರವನು ನೋಡಿ ವೃತ್ರ ವೈರಿ ।
ಮಿಂದು ಶುಚಿಯಾಗಿ ಮುದದಿಂದಲಿ ಕೊಂಡಾಡಿ ।
ಮಂದರಧರದೇವ ವಿಜಯವಿಠಲ ಸೂ ।
ಧೇಂದ್ರ ಸ್ವಾಮಿಯ ಪಾದ ದ್ವಂದ್ವವನು ನೆನಸುತ್ತ ೪

### ತ್ರಿವಿಡಿತಾಳ

ಆಸನವನು ಹಾಕಿ ಶ್ವಾಸೋಚ್ಛಾಸವ ಬಂಧಿಸಿ ।
ಲೇಶವಾದರು ಕಾಯದಾಶಿಯಾ ಮಾಡದೆ ।
ಬ್ಯಾಸಿಗೆ ಬಿಸಲೆನದೆ ಬ್ಯಾಸರಕಿಯ ಬಿಡದೆ ।
ವಾಸವ ಕುಳಿತು ಸಂತೋಷದಲ್ಲಿ ।
ಕೇಶವ ಮಧುಸೂದನ ಶ್ರೀಶನಂಘ್ರಿಯ ಒಂದು ।
ವಾಸರ ಬಿಡದರ್ಚಿಸಲಾಗೀ ।

ದೇಶಾಧಿಪ ಸುಧೇಂದ್ರವಾಸ ವಿಜಯವಿಠಲ ।
ದಾಸಗೆ ಒಲಿದು ಬಂದ ಸತಿಯ ಕೂಡ ೫

## ಅಟ್ಟತಾಳ

ಗೌತುಮನ್ನ ಸತಿ ಪತಿವ್ರತೆ ಅಹಲ್ಯಾ ।
ಕಾತುರದಲ್ಲಿ ಪುರುಹೂತನ ಶಾಪಿಸಿರೆ ।
ಸೋತ್ತುಮರಿಗೆ ಬಲು ಪಾತಕ ಬಂದರೆ ।
ಚಾತುರ್ಯದಲಿ ಅಜಾತು ಮಹಾವಿಷ್ಣು ।
ಪ್ರೀತಿಯಲ್ಲಿ ತಿಳಿದ ತಾನು ಭಕುತರ ।
ಭೀತಿಯ ಹರಸುವ ಮಾತು ಪೇಳದ ಮುನ್ನ ।
ಭೂತಳದೊಳು ಮಧುಘಾತಿ ಸುಧೇಂದ್ರಾನಿಲ ।
ಕೇತನ ವಿಜಯವಿಠಲಾತುಮದೇವ ೬

## ಆದಿತಾಳ

ಪೊಂದಿದ ಕಲುಷ ಕಳೆದು ಇಂದ್ರನುದ್ಧರಿಸಿದ ।
ಅಂದು ಮೊದಲಾಗಿ ದೇವೇಂದ್ರ ಸಾಸಿರ ನಯನಾ ।
ನೆಂದು ಕರಿಸಿಕೊಂಡು ಸುಖದಿಂದ ವಾಲಗವಾಗದ ।
ಸಂದೇಹ ತೊರದು ನರರು ಬಂದು ಯಾತ್ರಿಮಾಡಲು ಗೋ ।
ವಿಂದನು ಕರುಣಾರಸದಿಂದ ಸಾಕುವನವರ ।
ಎಂದೆಂದು ಬಿಡದೆ ಸುಧೇಂದ್ರಸ್ವಾಮಿ ಮಧುವೈರಿ ।
ವೃಂದಾವನ ಪ್ರೀಯ ವಿಜಯವಿಠಲರೇಯನ ।
ಸಂದರುಶನವಾಗೆ ಮಂದ ಬುದ್ಧಿ ಪೋಪುವುವು ೭

## ಜತೆ

ದಕ್ಷಿಣ ಸಾಲಗ್ರಾಮಕ್ಷೇತ್ರ ಸುಧೇಂದ್ರಾ ।
ಅಕ್ಷಯಾಬ್ಧಿವಾಸಾ ವಿಜಯವಿಠಲಧೀಶಾ ೮

# ೬೨. ಶ್ರೀಮುಷ್ಣ

## ಧ್ರುವತಾಳ

ಜೀವನ್ನ ಭಿನ್ನ ಗಗನಾವನ್ನಾ ಜನಕಾ ತ್ರಿ ।
ಭುವನ್ನ ಸಂಜೀವನ್ನ ಕಾವನಯ್ಯಾ ।
ಪಾವನ್ನ ಕಾಯ ಕಂಬುಗ್ರೀವನ್ನ ವರವಾ ।
ನೀವನ್ನ ಅಘವನ ದಾವನ್ನ ಧರುಣಿ ।
ಧಾವನ್ನ ಸುರತತಿ ಕಾವನ್ನ ಸರಸಿಜಾ ।
ಭಾವನ್ನ ನಾಸದುದು ಭಾವನ್ನಾ ನಮಿತರ ।
ನೋವನ್ನ ಕಾವನ್ನ ಶ್ರೀ ವನ್ನಜಾ–ನಯ ।
ನಾ ವಿಜಯವಿಠಲಾ ದೇವನ್ನ ಪಾದ ।
ರಾಜೀವನ್ನವಾ ನಂಬಲು ।
ಜೀವನ್ನಾದ್ಯಾರೊಪ್ಪುವರೂ ।
ಈವನ್ನಾ ನುತಿಸೆ ಮತ್ತಾವನ್ನ ವಶವೆ ೧

## ಮಟ್ಟತಾಳ

ಕನಕಾಕ್ಷನ ಮಡುಹಿ ಅನಿಮಿಷ ಗಣದವರ ।
ಕ್ಷಣದೊಳು ಪಾಲಿಸಿ ಮನದಿಚ್ಛೆಯಲ್ಲಿ ।
ಮನಸುಖರಾಯನು ಜನರಗೋಸುಗಡುಳ್ಳಿ ।
ವನದ ಮಧ್ಯದಲಿ ಮನೋಹರವಾಗುತ್ತ ತನಗೆ ತಾನೆ ನಿಂದಾ ।
ಘನ ಹರುಷದಲಿ ಪುತ್ತನು ಒಪ್ಪುತಿರಲು ।
ಅನಿಲಾವಂದಿತ ವರಹಾ ವಿಜಯವಿಠಲರಾಜಾ ।
ನನ ಮಂಡಲದಂತೆ ಮಿನುಗುತ ಮುದದಿಂದ ೨

## ರೂಪಕತಾಳ

ಪದಜಾ ಸುಶರ್ಮನೂ ಸದರಾವಿಲ್ಲದೆ ಧಾನ್ಯ ।
ಒದಗಿ ಬೆಳೆಸುತಿರೆ ಅದನರಿದು ಲಕುಮೀಶ ।
ಮದವಾದಾ ರೋಮ ಶಾಬದದಂತೆ ಪ್ರತಿದಿನ ।

ಮದದು ಪೋಗುತಲಿರಾಲದ ನೋಡಿ ಅವನಂದು ।
ಕದನಾ ಮಾಳಿಪೆನೆಂದು ಹುದಗಿಕೊಂಡಿರಲಾಗಿ ।
ತ್ರಿದಶಾವಂದಿತ ಶ್ವೇತವರಹಾ ವಿಜಯವಿಠಲಾ ।
ಪದಜಾಗೆ ಒಲಿದು ತೋರಿದನು ಆನಂದವಾ ೩

## ಝಂಪೆತಾಳ

ಪೆಸರಾದನಂದು ಮೊದಲಾಗಿ ಸೂಕರನು ಈ ।
ವಸುಧಿಯೊಳಗೆ ಸ್ವಯಂ ವ್ಯಕ್ತನೆಂದೂ ।
ಹಸನಾಗಿ ತೋರಿದನು ಅಬುಜಭವಾದ್ಯರಿಗೆ ।
ಮಿಸುನಿಪ ಕಾಂತಿಯಲಿ ಶೋಭಿಸುತಲೀ ।
ಪಸರಿಸಿದವು ಬೀದಿ ಪ್ರಾಕಾರಗೋಪುರ, ಗ ।
ಳೂಸುರಲಳವೆ ಉರಗಾಧಿಪಗಾದರೂ ।
ಶ್ವಸನ ದೇವರು ತನ್ನ ಮಂದಿರದಲ್ಲಿ ಪೂ ।
ಜಿಸಿದ ಶ್ವೇತವರಹ ವಿಗ್ರಹವನೂ ।
ನಸುನಗುತ ನಿಲ್ಲಿಸಿದ ಸುರರುಘೆ ಎಂದೆಚ್ಚ ।
ಕುಸುಮ ವರುಷಾಗರಿಯೆ ಗಮಕದಲ್ಲೀ ।
ಅಸುರಾರಿ ಶ್ರೀಮುಷ್ಣವರಹಾ ವಿಜಯವಿಠಲ ।
ವಸತಿಯಾದನು ಬಿಡದೆ ಕಲ್ಪಕಲ್ಪಾದಲ್ಲಿ ೪

## ತ್ರಿವಿಡಿತಾಳ

ಪಾವನ್ನಾ ವಿಮಾನಾ ಪವನಾ ಸಂಬಂಧವೆನ್ನಿ ।
ದೇವನಂಗದಾ ಬೆವರೇ ತೀರ್ಥಾವೆನ್ನಿ ।
ಪಾವನವಾದಾ ವೃಕ್ಷವೆ ಎಡಗಣ್ಣಿಂದ ।
ತಾ ಉದುಭವಾವಾದಶ್ವತ್ಥವೆನ್ನಿ ।
ಪಾವನಕ್ಷೇತ್ರವಿದು ಪರಮ ಪವಿತ್ರವೆನ್ನಿ ।
ಜೀವನಮುಕ್ತರಿಗೆ ಸಿದ್ಧಾವೆನ್ನಿ ।
ದೇವರದೇವ ವಿಜಯವಿಠಲ ವರಹಾ ।
ಪೋವೊಂದೇರಿಸಿದರು ಗತಿಯಾ ಪಾಲಿಪಾನೂ ೫

### ಅಟ್ಟತಾಳ

ತ್ರಯಯೋಜನ ಸುತ್ತ ಪುಣ್ಯಭೂಮಿ ಕಾಣೊ ।
ಭಯಭಕುತಿಲಿಂದ ಆವನಾದರು ಬಂದು ।
ತ್ರಯದಿನದಲ್ಲಿ ನುತಿಸಿ ಪಾಡಲು ಜಗ ।
ತ್ರಯದೊಳಗಾವನು ಶುದ್ಧಾತ್ಮನೆನಿಸುವ ।
ಗಯ ಪ್ರಯಾಗ ಕಾಶಿ ಮಾಡಿದ ಫಲಗಳು ।
ಕ್ರಯಕೆ ಕೊಂಬುವದು ಕೊಂಬುವದು ಶತಸಿದ್ಧಾ ।
ಲಯ ವಿವರ್ಜಿತ ಪಂಚಸೂಕರ ದೇವ ವಿ ।
ಜಯವಿಠಲನ್ನ ನಿಜಯಾತ್ರಿಗೈಯಾಲು ।
ಅಯೋ ನಿಜನಾಗಿ ಅರ್ಚಿಸುವಾ ಹರಿಯಾ ೬

### ಆದಿತಾಳ

ನೀತಿಯಿಂದ ಮಣಿಮುಕ್ತ ಶ್ವೇತಸಂಗಮದ ಸ್ನಾನ ।
ಪ್ರೀತಿಯಿಂದ ಷೋಡಶನದಿ ತೀರಥವನು ಮಾಡಿ ।
ಶ್ವೇತವರಹ ದರುಶನ ವಾತನಂತರ್ಗತವೆಂದು ।
ಮಾತು ಪೇಳುವಪಿತರೊಳು ಪಾತಕವೆ ಪರಿಹಾರಾ ।
ನೇತುರ ವದನ ನಾಸಾ ಶೋತುರಹಸ್ತಾಸರುವ ।
ಗಾತುರ ಪವಿತೂರವೂ ಯಾತರ ದುಶ್ಚಿತ್ತಾವಣಿ ।
ಮಾತುರ ಸಂಶಯವಿಲ್ಲ ಗೋತುರಕ್ಕೆ ಗತಿ ಉಂಟು ।
ಶ್ವೇತದ್ವೀಪದ ರಾಶಿವರಹ ವಿಜಯವಿಠಲನು ಈ ।
ಕ್ಷೇತುರ ಒಮ್ಮೆ ನೋಡಲು ಕಾತುರವ ಬಿಡಿಸುವ ೭

### ಜತೆ

ನಿತ್ಯ ಪುಷ್ಕರಣಿಯಾ ವಾಸಾ ಶ್ರೀನಿವಾಸ ।
ಭೃತ್ಯವರ್ಗವ ಪಾಲಾ ವರಹಾ ವಿಜಯವಿಠಲಾ ೮

## ೯೩. ಶ್ರೀರಂಗ

### ಧ್ರುವತಾಳ

ಇಂದ್ರಾದಿಗಳು ತಮ್ಮ ಸಂದಣಿಯ ಸಮೇತಾ ।
ಒಂದಾರು ಪ್ರಾಕಾರ ಒಂದಾರು ಬೀದಿಯೊಳು ।
ನಿಂದು ನಿರ್ಮಳರಾಗಿ ಒಂದೊಂದು ಪರಿ ರಂಗ ।
ಮಂದರದಲ್ಲಿದ್ದ ಇಂದಿರೇಶನ ಪಾದ ।
ದ್ವಂದ್ವವ ಎಣಿಸಿ ಒಂದೊಂದು ಗುಣಗಳ ।
ನಂದವ ನೆನವುತ್ತ ಮುಂದುಗಾಣದ ಸುಖ ।
ಸಿಂದುವಿನೊಳಿಪ್ಪರು ಕಂಧರವನ್ನು ತೂಗಿ ।
ಗಂಧರ್ವತುಂಬುರ ನಾರಂದನು ಮಹಾ[ಮ]ತಿ ।
ಯಿಂದ ನುಡಿಸಿ [ತಾರಾಮದಿಂದಲಿ] ।
ಕಂದೆರಡೂ ಮುಚ್ಚಿ ಕಂದನ ನುಡಿಯಂತೆ ।
ಒಂದೊಂದು ಕೀರ್ತಿಸಿ ವಂದನೆ ಮಾಡಲು ।
ಬಂದ ಶರೀರ ಸಾಲದೆಂದೆಂಬೊ ಗಾದೆಯಾಗೆ ।
ಮಂದರಧರ ಗೋವಿಂದ ವಿಜಯವಿಠಲ ।
ಸುಂದರವಿಗ್ರಹ ಒಂದೆ ದೈವವೆ ರಂಗ ೧

### ಮಟ್ಟತಾಳ

ರಂಗ ರಂಗ ರಂಗಾಧಾಮಾರಂಗ ಕಸ್ತೂರಿರಂಗ ಕಾವೇರಿ ।
ರಂಗ ವೈಭೋಗರಂಗ ಜಗದಂತರಂಗ ರಂಗರಂಗನಾಥ ।
ರಂಗಶಾರಂಗ ದುರಿತ ಸಂಘ ದೂರ ರಂಗ ದನುಜ ।
ಭಂಗ ಶೌರಿ ರಂಗರಾಮಾ ವಿಜಯವಿಠಲ ।
ರಂಗೇಶ ರಂಗಮಂದಿರ ವಾಸ ೨

### ತ್ರಿವಿಡಿತಾಳ

ಸಮುತ ಪ್ರಾಕರವೆ ಸಮುತಾವಾರಿಧಿ ಎನ್ನಿ ।
ಸಮುತ ಬೀದಿಗಳು ಸಪ್ತದ್ವೀಪ ಎನ್ನಿ ।

ತಪುತ ಕಾಂಚನಮಯ ಸುಮೇರು ಪರ್ವತ ।
ಗುಪುತ ಮಹಿಮಾನಿಪ್ಪ ಸ್ಥಾನವೆನ್ನೀ ।
ಸಪುತಾಶ್ವ ಚಂದ್ರಮಾ ಬಿಡದೆ ತಿರುಗುವರೆನ್ನಿ ।
ಸಪುತಾಋಷಿಗಳಲ್ಲಿ ವಾಸಾವೆನ್ನಿ ।
ಸಪುತೆರಡು ಲೋಕದಲಿ ಇದು ವೆಗ್ಗಳವೆನ್ನಿ ।
ಶಪುತ ಮಾಡುವರೊಡಿಯಾ ವಿಜಯವಿಠಲರೇಯಾ ।
ಕುಪಿತರ ಸಂಹಾರಾ ಭಕುತರ ಉದ್ಧಾರಾ ೩

## ಅಟ್ಟತಾಳ

ಆವಾನಾದರು ಬಂದು ಭಾವ ಶುದ್ಧದಲ್ಲಿ ।
ರಾವಣಾಂತಕ ನಿದ್ದ ಈ ವೈಕುಂಠನ ।
ಸೇವೆಯ ಮಾಡಾಲು ಸಾವಿರ ಬಗೆಯಿಂದ ।
ಶ್ರೀ ವಾಸುದೇವನು ತಾವೊದಗಿ ಬಂದು ।
ಕೋವಿದರನ ಮಾಡಿ ಪಾವನರೊಳಿಡುವ ।
ಕಾವೇರಿ ನಿವಾಸಾ ವಿಜಯವಿಠಲರಂಗ ।
ದೇವನ ಕ್ಷೇತ್ರವ ಆವ ಬಣ್ಣಿಪನು ೪

## ಆದಿತಾಳ

ಬಯಸಾದಿರು ಮೇಲು ಲೋಕ ಬಯಸಾದಿರು ನಾಗಲೋಕ ।
ಬಯಸದಿರು ಸ್ವರ್ಗ ಸಕಲದಿಕ್ಪಾಲಕರ ಸುಖಗಳ ।
ಬಯಸು ಮನುಜಾ ರಂಗಕ್ಷೇತ್ರದಲ್ಲಿ ಒಂದು ದಿವಸಾವಿದ್ದು ।
ದಯಪಯೋನಿಧಿಯ ಪಾದ ಭಯಭಕುತಿಯಿಂದ ನೋಡೆ ।
ಬಯಲಾಗುವುದು ಪಾಪಾತ್ರಯಕಾಲದಲ್ಲಿ ಒಲಿದು ।
ಜಯಾ ಮೂರ್ತಿರಂಗಾ ವಿಜಯವಿಠಲ ಸಿರಿ ರಮಣಾ ।
ಈಯಬಲ್ಲ ಈ ಪರಿಗಾಯನ ಮಾಡಲು ವೇಗ ೫

## ಜತೆ

ವಿಧು ಪುಷ್ಕರಣಿಯಾ ನಿವಾಸ ಶೇಷಶಾಯಿ ।
ಮಧುವೈರಿ ವಿಜಯವಿಠಲ ರಂಗಧಾಮಾ ೬

## ೯೪. ಶ್ರೀರಂಗ

### ಧ್ರುವತಾಳ

ರಂಗರಂಗ ವಿಹಂಗತುರಂಗ ತು ।
ರಂಗವದನ ತುರಂಗಖಳರ ಮರ್ದನ ।
ರಂಗ ಭಕ್ತರಂಗದೊಡಿಯಾ ಶಾ ।
ರಂಗ ಚಾಪಾಪಾಣಿ ಸಂಗೀತಲೋಲ ।
ಮಂಗಳಂಗ ಪ್ಲವಂಗ ನಾಯಕ ತಾ ।
ರಂಗಮಹಿಮ ಪಾತಂಗ (ಕುಲೋದ್ಧಾರ) ಕುಲೋದ್ಭವ ।
ರಂಗ ನಿಸ್ಸಂಗ ದೋಷಾಸಂಗಾ ಸತತ ದೂರಾ ।
ತುಂಗ ವಿಕ್ರಮ ಭುಜಂಗಶಯನಾ, ಮಾ ।
ತಂಗ ವರದ ದೈತ್ಯಭಂಗ ಹೃತ್ಸರಸಿಜ ।
ಭೃಂಗ ಭಾನುತೇಜ ಗಂಗಾಜನಕ ।
ಜಂಗಮ ಸ್ಥಾವರ ಜಂಗುಳೀ ಪರಿಪಾಲ ।
ರಂಗ ಮಂದಿರವಾಸರ ರಂಗರಂಗೇಶಾ ।
ರಂಗ ಮೂರುತಿ ನೀಲಾಂಗ ವಿಜಯವಿಠಲ ।
ಡಿಂಗರಿಗೊಲಿದ ತಿರುವೆಂಗಳೇಶಾ ೧

### ಮಟ್ಟತಾಳ

ಸರಸಿಜಭವನಿಂದ ನಿರುತ ಪೂಜಿಗೊಂಬ ।
ವರಶ್ರೀರಂಗದೇವಾ ಧರಣಿಯೊಳಗೆ ಸವಿತರವಂಶಕೆ ಬಂದು ।
ಪರಿಪರಿವಿಧದಲಿ ಮೆರೆದು ಪಾರಂಪರೆಯ ।
ಅರಸರಸರ ಕೂಡ ಪರಮತೋಷದಲಿದ್ದ ।
ಕರುಣಾಂಬುಧಿರಂಗ ವರಮಂದಿರವಾಸ ।
ವಿಜಯವಿಠಲರೇಯಾ ।
ಶರಣರ ಮನಕೆ ಗೋಚರವಾಗುವ ದೈವಾ ೨

## ರೂಪಕತಾಳ

ಅಜರಾಯಸುದರದಲಿ ಸೃಜಿಸಿ ದಶರಥರಾಯಾ ।
ಭಜಿಸಿ ಪಡದಾನಂದು ತ್ರಿಜಗದ ಒಡಿಯನ್ನ ।
ಅಜನ ತಾತನು ಪುಟ್ಟಿ ರಜನಿ [ಚ]ರನು ಕುಟ್ಟಿ ।
ನಿಜಸತಿಯಾ ಕೂಡ ಪರಂಜನೇತ್ರ ಮೆರದಾನು ।
ರಜದೂರ ವಿಜಯವಿಠಲ ರಂಗರಾಮಾ ।
ಭಜಿಸುವರ ಮನೋವ್ರಜಾವಂಧದೂರ ೩

## ಝಂಪೆತಾಳ

ಭಕ್ತ ವಿಭೀಷಣನ ಭಯವನ್ನೆ ಪರಿಹರಿಸಿ ।
ಉತ್ತರೋತ್ತರಿರುವಂತೆ ಅಭಯವಿತ್ತು ।
ಭಕ್ತಿಗೆ ಒಲಿದು ತಿರುಗಿ ಪೋಗು ಎಂದೆನಲು ।
ಉತ್ತರಕೆ ತಲೆವಾಗಿ ಬಿನ್ನೈಸಿದಾ ।
ಚಿತ್ತದೊಡಿಯಾ ರಾಮಾ ನಿನ್ನಗಲಿ ಕಾಲಕಳ ।
ವೃತ್ತ ಇರಬಹುದೆ ನಂಬಿದ ದಾಸರೂ ।
ಭೃತ್ಯ ನುಡಿವುದನು ಲಾಲಿಸಿದಾ ಸರ್ವೋತ್ತುಮಾ ।
ಇತ್ತಾನು ವರಮೂರ್ತಿಯನು ಪಾಲಿಸೀ ।
ಸತ್ಯಸಂಕಲ್ಪರಾಮ ರಂಗ ವಿಜಯವಿಠಲ ।
ಹತ್ತಾವತಾರದ ಪುರುಷ ಸಿರಿ ಅರಸಾ ೪

## ತ್ರಿವಿಡಿತಾಳ

ಪೊದವಿಗಿ[ಳು]ಹದಲೆ ನಿನ್ನ ಪುರಕೆ ವೈದು ।
ಕಡುಪೂಜೆ ಮಾಡೆಂದು ಹೇಳಲಾಗಿ ।
ಪೊಡವಟ್ಟು ವಿಭೀಷಣ ಶಿರಸಾವಹಿಸಿಕೊಂಡು ।
ನಡೆದು ಬರುತಿರಲು ಹರಿ ಮಾಯದಿಂದ ।
ತಡಧಾದಿಯಲ್ಲಿ ಬಂದು ಸಾಗದಂತಾಗಲು ।
ಒಡನೆ ಸಾಹಸಮೀರಿ ಕೀಳಾಲೇಳಾದಿರೆ ।

ದೃಢಾಗುಂದಿ ವಿಭೀಷಣನಿಂದಿರಲೂ ।
ಒಡಿಯಾ ಪುಷ್ಕರಣಿಯವಾಸಾ ರಂಗರಾಯಾ ।
ಬಡವರದಾಸ ಶ್ರೀ ವಿಜಯವಿಠಲರೇಯಾ ।
ಸಡಗರದ ಮಹಿಮಾ ಮೆರದಾನಂದು ಮೊದಲು ೫

### ಅಟ್ಟತಾಳ

ಭಕುತಿಗೆ ವರವಿತ್ತು ಸುಖ ಸಾಂದ್ರರದೇವ ।
ವಿಕಳಾನಾಗಾದೆ ನೀ ಸಕಲ ಕಾಲಾದಾಲಿ [ಅರ್ಚಕ]ನಾಗಿರು ಎಂದು ।
ಕಕುಲಾತಿ ಬಿಡಿಸಿ ಸಾರೆ ಕರೆದು ಪೇಳಿದ ।
ರಕ್ಕಸರ ಪುರವಾಸಕ್ಕೆ ಸಲ್ಲಾ ಎನಗಿರತಕ್ಕದಲ್ಲಾವೆಂದೂ ।
ಲಕ್ಕುಮಿ ರಮಣ ಪೇಳೆ ।
ಅಕಳಂಕ ರಂಗೇಶಾ ವಿಜಯವಿಠಲ ತಾ ।
ರಕವಾ ವಿಮಾನದಲಿ ಮುಕುತಾ[ರ್ಥ]ನಲಿವಾ ೬

### ಆದಿತಾಳ

ತೇಜೋಮಯನು ಇಲ್ಲಿ ರಾಜಿಸುತ ಪವ[ಡಿ]ಸಿದ ।
ರಾಜಾ ಸರೋವರದಲ್ಲಿ ರಾಜಾ ರಾಜಾರಂಗರಾಜಾ ।
ರಾಜಶೇಖರ ಬೊಮ್ಮಾಸುರರಾಜ ಗಂಧರ್ವಾದಿಯಿಂದ ।
ಪೂಜೆಗೊಳುತ ಪೂರ್ಣವಾಗಿ ನಿ ।
ಕೂಜಿದವರ ಪೊರವುತ್ತಾ ।
ಮೂಜ್ಜಗದೊಡಿಯಾ ರಂಗರಾಜಾರಾಮಾ ವಿಜಯವಿಠಲ ।
ಯೋಜನಪಾರಕ್ಕೆ ನೆನಿಯಮಾಜಾದೆ ಸತ್ಪುಣ್ಯ[ವ]ನೀವಾ ೭

### ಜತೆ

ಉಭಯಾ ಕಾವೇರಿಯಾ ವಾಸಾ ಅನಿಮಿಷಾಧೀಶಾ ।
ವಿಭುವೆ ರಂಗರಾಮಾ ವಿಜಯವಿಠಲರೇಯಾ ೮

## ೯೫. ಶ್ರೀಶೈಲ

### ಧ್ರುವತಾಳ

ಶ್ರೀಶೈಲಾ ಪಂಚಪಂಚಕ್ರೋಶಾ ಯಾತ್ರೆಯುಂಟು ।
ಶೇಷಾದ್ರಿ ಪುಚ್ಛಭಾಗಾವೆಂದು ತಿಳಿದೂ ।
ಶೇಷಭೂಷಣನಿಲ್ಲಿ ವಾಸವಾಗಿಪ್ಪನು ।
ಶ್ರೀಶನ ದಯದಿಂದ ತೀರ್ಥಾಸವನೀವುತ್ತ ।
ದೇಶದೊಳಗೆ ಭೂಕೈಲಾಸದಿಕವಿದು ।
ಕಾಶಿ ರಾಮೇಶ್ವರ ಮಧ್ಯದಲ್ಲೀ ।
ದೋಷವಿಬಂಧನಾ ಪಾಶಾನೆ ಹರಿಸೋದು ।
ವಿಸಜನ್ಮದ ಕ್ಲೇಶನಾಶನವಾಗುವದೂ ।
ಕೇಶವನ ಧೀರ್ಘದ್ವೇಷಿಗಳು ಇಲ್ಲಿ ।
ವಾಸವಾದರು ಫಲಾ ಲೇಶವಿಲ್ಲ ।
ವಾಸುದೇವನಾಮಾ ವಿಜಯವಿಠಲರೇಯನ ।
ದಾಸನಲ್ಲಾದವಗೆ ಈ ಸುಲಭ ದೊರಕೋದೆ ೧

### ಮಟ್ಟತಾಳ

ಸುತನ ಸ್ನೇಹದಿಂದ ಪಿತಾಮಹನು ಬಂದು ।
ಅತಿಶಯದೀಶನಾ । ಹಿತವಾಗಿ ಪೂಜಿಸಿದ ।
ಸತತ ವಲ್ಮೀಕದೊಳು ಮಿತಿಯಿಲ್ಲದ ವರುಷಾ ।
ಹುತನೇತ್ರನಿರಲು ।
ಜಿತಮನ್ಯುನಾಮಾ ವಿಜಯವಿಠಲನ್ನ ಅ ।
ಮೃತ ನಾಮವನ್ನು ಪ್ರತಿದಿನ ನೆನೆಸುತ್ತ ೨

### ರೂಪಕತಾಳ

ಚಂದ್ರಗುಪ್ತನೃಪನಾ ಮಂದಿರದಿಂದಲ್ಲಿ ।
ಬಂದು ಉತ್ತಮವಾದ ಅಂದಾವುಳ್ಳಕಳೂ ।
ಬಂದು ನಿರಂತರ ಚಂದವಾಗಿ ಕ್ಷೀರ ।

ಬಿಂದು ಮಾತುರ ಇಡದೆ ಅಂದು ಕರವುತಿರೆ ।
ಒಂದುದಿನ ನೃಪತಿ ಅಂದು ಗೋವನು ಕರ ।
ತಂದು ದಂಡಿಸಲಾಗ ಬಂದಾಗ ಪರೀಕ್ಷಿಸಿದ ।
ಸಂಧಿಮಾತೆ ನಾಮಾ ವಿಜಯವಿಠಲನಾ ಕೃಪೆ ।
ಯಿಂದ ಪೆಸರಾದಾನೆಂದು ತಿಳಿವುದೂ ೩

### ಝಂಪೆತಾಳ

ಈ ತೆರದಲಿರುತಿರಲು ಭೂತನಾಥನು ಮುಂದೆ ।
ಸೀತಾಂಶಳಾಗುಪ್ತಜಳು ಮಲ್ಲಿಕಾ ಎಂಬುವಳು ।
ಚಾತುರ್ಯವಂತೆ ಯವ್ವನಾತುರದಿ ಒಪ್ಪುತಿರೆ ।
ಸೋತನಾಗವಳ ಪಿತ ಕೈದುಡುಕಲು ।
ಕಾತುರದಲಿ ಪಿತನ ಶಾಪಿಸಿ ವೇಗದಲಿ ।
ಭೂತೇಶನೊಳಗೆ ಗೋಪಾಲ ಸಮ್ಮೇತಾ ।
ತಾ ತವಕದಲ್ಲಿ ಪ್ರವೇಶವಾದಳಂದು ।
ಮಾತು ಪುಶಿಯಲ್ಲನಿಶ್ಚಯವೆನ್ನಿರೊ ।
ಜ್ಯೋತಿರಾದಿತ್ಯ ಶಿರಿ ವಿಜಯವಿಠಲನ್ನ ।
ಪ್ರೀತಿ ಸಂಪಾದಿಸಿ ಲಾಲಿಸುವದಿದನೂ ೪

### ತ್ರಿವಿಡಿತಾಳ

ಇಲ್ಲಿ ಈರ್ವರು ಬಂದು ಪೊಕ್ಕಾ ಕಾರಣದಿಂದ ।
ಮಲ್ಲಿಕಾರ್ಜುನನೆಂಬ ನಾಮಾದಲ್ಲೀ ।
ಎಲ್ಲ ಲೋಕದಲೀಶ ಕರಿಸಿಕೊಂಡನು ಸುರ ।
ರೆಲ್ಲಾರು ಕೊಂಡಾಡೆ ವಿಜಯದಿಂದಾ ।
ಬಲ್ಲಿದ ಶಶಿಗುಪ್ತಾ ಕೂಪಿತಾದಲ್ಲಿ ಗಿರಿಜಾ ।
ವಲ್ಲಭಗೆ ಶಪಿಸೀದಾ ನಿನ್ನಾ ನೋಡಲು ಗತಿ ।
ಇಲ್ಲಾದೆ ಪೋಗಲಿ ಎನುತಾ ಪೇಳಲು ಗಿರಿಜಾ ।

ವಲ್ಲಭ ಕರುಣದಲಿ ಶಿಖರಕ್ಕೆ ವರವಿತ್ತಾ ।
ಖುಲ್ಲಾದಲ್ಲಣ ಶ್ರೇಷ್ಠಾ ವಿಜಯವಿಠಲರೇಯಾ ।
ಸಲ್ಲಿಸುವನು ಭಕುತಿಯಲ್ಲಿ ನಡೆದರೆ ಪುಣ್ಯ ೫

**ಅಟ್ಟತಾಳ**

ನವಭಕುತಿಯಲಿಂದ ನವನದಿಯಲಿ ಸ್ನಾ ।
ನವನು ಮಾಡಿದ ಮಾನವನ ಪುಣ್ಯಕೆ ಇ ।
ನ್ನವನಿಯೊಳಗಾವನಾವನು ವಿಧಿತ ಸಾಧ ।
ನವನು ತೀರಿಸಿದ ಮಾನವಗೆ ಪಡಿಯುಂಟೆ ।
ನವನೀತ ಚೋರ ವಿಜಯವಿಠಲನ ಧ್ಯಾ ।
ನವನು ಕೈಕೊಂಡಾಗಾನವ ನೀತರಾಗಿ ೬

**ಆದಿತಾಳ**

ಶ್ರೀಗಿರಿಯಲ್ಲಿ ವಾಸವಾಗಿ ಒಂದು ನಿಮಿಷಾ ನಿಜಾ ।
ಭಾಗವತರೊಡಗೂಡಿ ಜಾಗರತನದಿಂದಲಿ ।
ಆಗಮ ಸಿದ್ಧಾಂತವುಳ್ಳ ಸಾಗರದೊಳಗೆ ವಿ ।
ಯೋಗವಾಗದಂತಿದ್ದು ಸಾಗರಶಯನನ ಸೇವೆ ।
ಜಾಗುಮಾಡದತಿಮಾಡಿ ನೀಗಿ ಭವರೋಗಗಳು ।
ಯೋಗಿಗಳು ಬಲ್ಲರಿದು ಈಗಿನ ಮಾತಲ್ಲವಲ್ಲ ।
ಭೂಗರ್ಭನಾಮ ಸಿರಿ ವಿಜಯವಿಠಲ ಬಲ್ಲಾ ।
ಕಾಗಿಯಂತೆ ಮುಣಗಿದರು ।
ಆಗದಾಗದು ಕೈವಲ್ಯಾ ೭

**ಜತೆ**

ಎಂದಿಗಾದರು ಒಮ್ಮೆ ಜ್ಞಾನದಿಂದಲಿ ನೋಡೆ ।
ಬಂದು ಮಹವೀರ್ಯಾ ವಿಜಯವಿಠಲನೊಲಿವಾ ೮

## ೯೬. ಶ್ವೇತಶೃಂಗಿ

### ಧ್ರುವತಾಳ

ಅನ್ನದಾನ ಮಾಡದಗೋಸುಗ ಶ್ವೇತರಾಯ ।
ತನ್ನ ಮಾಂಸ ತಾನೆ ಕೆತ್ತಿಕೊಂಡೂ ।
ತಿನ್ನು ತಿಪ್ಪನು ನಿತ್ಯ ಕ್ಲೇಶವ ಬಡುತಲಿ ।
ಬನ್ನದೊಳಗಾಗಿ ಸ್ವರ್ಗದಲ್ಲಿ ವಾಸ ।
ಮುನ್ನೆಗತಿ ಕಾಣದೆ ಇರುತಿರೆ ನಾನಾಧರ್ಮ ।
ಅನಂತ ಮಾಡಿದ ಕಾಲಕ್ಕಾಗೇ ।
ಅನ್ನದಾನ ಮಾಡದಗೋಸಗ ಈ ಬಗೆಯು ।
ಇನ್ನೇನು ಪೇಳಲಿ ಇತ್ತ ನಾರಂದ ಮುನಿ ।
ಪನ್ನಗಶಯನನ ಪಾಡುತಲೀ ।
ಘನ್ನತೆಯಿಂದ ರಾಯಾನಿದ್ದೆಡಿಗೆ ಬರಲು ।
ಸನ್ನುತಿಸಿ ತನ್ನ ಸ್ಥಿತಿಯಾ ಪೇಳೆ ।
ಚೆನ್ನಾಗಿ ಲಾಲಿಸಿ ಅಹಹ ಹರಿಯೆ ಮಹಿಮೆ ।
ಬಣ್ಣಿಸಲರಿದೆಂದು ಶಿರವ ದೂಗಿ ।
ತನ್ನೊಳಗೆ ತಾನೆ ವಿ[ಸ್ಮಿ]ತನಾಗಿ ನುಡಿದನಾಗ ।
ಬನ್ನಣೆಯಿಂದ ಶ್ವೇತ ಭೂಪತಿಗೆ ।
ಆನಂತದೊಳಗೊಂದು ಕೃಷ್ಣ ಉತ್ತರವಾಹಿನಿ ।
ಪುಣ್ಯಕ್ಷೇತ್ರ ಉಂಟು ಅಲ್ಲಿಗೆ ಪೋಗಿ ನೀ ।
[ಚ]ನ್ನಮೂರ್ತಿಯ ಭಜಿಸಿ ನಿರ್ದೋಷ ನೀನಾಗೆನಲೂ ೧

### ಮಟ್ಟತಾಳ

ಸುರಮುನಿ ಮಾತಿಗೆ ನಮಿಸಿ ಸಂತೋಷದಲಿ ।
ಭರದಿಂದಲಿ ಮತ್ತೆ ಬೆಸನಮಾಡಿದನಯ್ಯಾ ।
ಅರುಹಬೇಕು ಎನಗೆ ಆ ಕ್ಷೇತ್ರದ ಮಹಿಮೆ ।
ವರಕೃಪೆಯಿಂದಲಿ ತಡಮಾಡದೆ ಎಂದು ।
ಅರಸು ಬಿನ್ನೈಸಲು ನಸುನಗುತ ಮೌನಿ ।

ವಿರಚಿಸಿದನು ವೇಗಾ ಪರಮ ಭಕುತಿತಯಿಂದ ।
ಪರಮಪುರುಷ ನಮ್ಮ ವಿಜಯವಿಠಲರೇಯನ ।
ಚರಣವ ಚಿತ್ತದಲ್ಲಿ ಧ್ಯಾನಿಸಿ ಆಗಮವ ೨

## ತ್ರಿವಿಡಿತಾಳ

ಕಾರ್ಪಾರಣ್ಯ ಕ್ಷೇತ್ರಕೆ ಅಪರ ಭಾಗದಲ್ಲಿ ।
ಇಪ್ಪದು ಈ ಕ್ಷೇತ್ರ ಅಲ್ಲಿಗೆ ಪೂರ್ವದಲಿ ।
ತಪ್ಪದೆ ಭೃಗು ಜಾತ ಜಮದಗ್ನಿ ಮಹಮುನಿ ।
ಒಪ್ಪಾದಿಂದಲಿ ತಪವಮಾಡಿ ವೇಗ ।
ಸಪ್ತತಲ್ಪನ ಮಗನಮಾಡಿಕೊಂಡ ಮೇಲೆ ।
ಸಪ್ತಋಷಿಗಳ ಕೂಡ ತಿರುಗುತಿಪ್ಪ ।
ಗುಪ್ತಮಂತ್ರವಿದು ನೀನು ಅಲ್ಲಿಗೆ ಪೋಗಿ ।
ಸಿಪ್ಪಿಯಂದದಿ ದೇಹಮಾಡಿಕೊಂಡೂ ।
ಅಪ್ಪಾರ ತಂತ್ರ ಶ್ರೀಹರಿ[ಯು] ಒಲಿಸಿ ನೀನು ।
ಇಪ್ಪ ದೋಷದಿಂದಾ ದೂರಾಗೆಂದಾ ।
ಅಪ್ಪಣೆಕೊಂಡು ಮುನಿ ಅತ್ತಲು ಪೋಗಲು ।
ಸುಪ್ರೀತಿಯಲಿ ರಾಯಾ ಇಲ್ಲಿಗೆ ಬಂದೂ ।
ಇಪ್ಪತ್ತುಸಾವಿರ ವರುಷ ದೇಹ ಶೋಷಿಸಿ ।
ನಿಷ್ಪಾಪನಾದನು ಈ ನದಿಯಲ್ಲಿ ।
ಸರ್ಪಭೂಷಣವಿನುತ ವಿಜಯವಿಠಲರೇಯಾ ।
ಸುಪ್ರಸನ್ನನಾಗಿ ಭೂಪತಿಯ ಪಾಲಿಸಿದ ೩

## ಅಟ್ಟತಾಳ

ಶ್ವೇತರಾಯನು ಬಂದು ತಪವು ಮಾಡಿದರಿಂದ ।
ಶ್ವೇತ ಪರ್ವತವೆಂದು ಕರೆಸಿಕೊಂಡಿತು ನೋಡ ।
ಸೀತಾರಮಣ ಬಂದು ಇಲ್ಲಿ ವಾಸವಾದ ।
ಆ ತರುವಾಯ ಶೃಂಗಿ ಎಂಬೊ ಮುನಿಪತಿ ।
ಈ ತಟಾಕದಲ್ಲಿ ಇದ್ದು ಸಿದ್ಧನಾದ ।

ಭೂತಳದೊಳಗಿದೆ ಉತ್ತಮ ನಿಧಿ ಎನ್ನಿ ।
ಮಾತಿಲಿ ಒಮ್ಮೆ ಸ್ಮರಿಸಿದಕಾಲಕ್ಕೂ ।
ಪಾತಕ ಕೆಡಿಸೋದು ತಡಮಾಡದೆ ಪ್ರ ।
ಖ್ಯಾತನ್ನ ಮಾಡೋದು ಜ್ಞಾನ ಭಕುತಿಕೊಟ್ಟು ।
ಪ್ರಾತಃಕಾಲಕ್ಕೆ ಎದ್ದು ಸ್ನಾನಾದಿಯ ಮಾಡೆ ಪ್ರ ।
ನೀತನಾಗಿ ತನ್ನ ಕುಲಕೋಟಿ ಸಮೇತ ।
ಪೂತುರೆ ಈ ಕ್ಷೇತ್ರ ಶತಗುಣಾಧಿಕ ವಿಶ್ವ ।
ನಾಥನಿಗಿಂತ ನುತಿಸಿ ಧ್ಯಾನವಮಾಡೆ ।
ಧಾತಾದಿ ಸುರರೆಲ್ಲ ಇಲ್ಲಿ ನಿಂದು ಗುಣ ।
ವ್ರಾತದಿಂದಲಿ ಕೇಶವನ ಪಾಡುವರಯ್ಯಾ ।
ಭೂತಳದೊಳಗಿದೆ ಶ್ವೇತ ಶೃಂಗಕ್ಷೇತ್ರ ।
ಯಾತಕೆ ಸಂಶಯ ಇಲ್ಲಿ ಬಂದೂ ಪುರು ।
ಹೂತ ಅಹಲ್ಯಾ ಸಂಗದಿಂದ ಬಂದಿದ್ದ ।
ಪಾತಕ ಕಳಕೊಂಡ ಏನೆಂಬೆ ಏನೆಂಬೆ ।
ಶ್ವೇತಕಾನನ ವಾಸ ವಿಜಯವಿಠಲರೇಯಾ ।
ಭೀತಿಯ ಬಿಡಿಸುವ ಈ ಪರಿ ತಿಳಿದರೆ ೪

**ಆದಿತಾಳ**

ಬಿಲ್ಲಕಾರಕ್ಷೇತ್ರ ಕಾರ್ಪರಾರಣ್ಯವಿಡಿದು ।
ಇಲ್ಲಿ ಪರಿಯಂತ ಎನಿಸೋದು ಸ್ಮೃತಿ ಉಕ್ತಿ ।
ಬಿಲ್ಲದ್ವಾರವೆ ಉಂಟು ಮುನಿಗಣ ಪೋಗಿ ಬರುವ ।
ಸಲ್ಲುವ ಸಲ್ಲುವದಿದು ಪಂಚಕೋಶ ಕ್ಷೇತ್ರ ।
ಮಲ್ಲಿಕಾರ್ಜುನದೇವ ಪರ್ವತದ ಸುತ್ತ ।
ಸಲ್ಲಲಿತವಾದ ಅಷ್ಟತೀರ್ಥಂಗಳುಂಟು ।
ಬಲ್ಲೀದ ಸೀತಾರಾಮ ಜಮದಗ್ನಿ ಶೃಂಗಿಶ್ವೇತ ।
ಕಲ್ಮಷ ಹರರುದ್ರ ನರಸಿಂಹ ಮುಖ್ಯವೆನ್ನಿ ।
ನಿಲ್ಲದಲೆ ಬಂದು ಮನುಜ ಸಮಸ್ತ ಸತ್ಕರ್ಮ ।
ದಲ್ಲಿ ಒಂದುವಾದರು ಸದ್ಭಕ್ತಿಯಿಂದಲಿ ।

ರಥ ನಾನಾ ಬಗೆ ಉಂಟು ಪ್ರತಿಕೂಲವಾಗದೇಪ ।
ರ ರೀತಿಯ ತಿಳಿದು ಭಕುತಿಯಿಂದಲಿ ಮಿಂದು ಅ ।
ಮೃತ ಭೋಜನ ದುಚ್ಚಿಷ್ಟಾ ಗತಿ ಎಂದು ಹೊರಳೆ ಪ ।
ವಿತ್ರನಾಗುವ, ಭಾಗೀರಥಿ ಸ್ನಾನಕ್ಕೆ ಒಂದು ।
ಶತಸಾರೆ ಪೋದಫಲ ಪ್ರಾಪ್ತತವಾಗುವದು ಕಾಣೊ ।
ಶತಸಿದ್ಧವೆನ್ನಿ ಉನ್ನತ ಕುಷ್ಟರೋಗಗಳು ।
ಹತವಾಗಿ ಪೋಗುವುದು ಪತಿತನಾದರು ಬಂದು ।
ತತುವ ಮಾರ್ಗದಲ್ಯುಚಿತವುದನ್ನು ತಿಳಿಯೆ ಮು ।
ಕುತಿವಂತ ಸತತದಲ್ಲಿ ।
ನುತಿಸಿದವರಿಗೆ ಶ್ರೀ ವಿಜಯವಿಠಲರೇಯಾ ।
ಚತುರದವರ ಸಂಗತಿಯಲ್ಲಿ ಪೊಂದಿಸುವ ೫

ಜತೆ

ಸುಬ್ರಹ್ಮಣ್ಯದ ಯಾತ್ರೆ ಎಂಥಾದೊ ತಿಳಿಯಾದು ।
ಶುಭ್ರಾವರಣ ವಿಜಯವಿಠಲ ನರಹರಿಬಲ್ಲಾ ೬

## ೯೮. ಹಂಪೆ

### ರಾಗ: ಅಭೇರಿ

### ಧ್ರುವತಾಳ

ದಕ್ಷಿಣ ವಾರಣಾಸಿ ಕ್ಷೇತ್ರವೆನಿಸುವದು ।
ಯಕ್ಷೇಶನಾಪ್ತ ಇಲ್ಲಿ ವಾಸವಯ್ಯಾ ।
ಅಕ್ಷರ ಒಂದು ನುಡಿವ ಹೊತ್ತು ಮನುಜಾ ಬಂದು ।
ಈ ಕ್ಷೇತ್ರದಲ್ಲಿ ಇದ್ದ ಫಲಕೆ ಇಲ್ಲಿ ।
ನೀಕ್ಷಿಸಿ ನೋಡಲು ಎಣಿಸಲಿನ್ನಾರಳವೆ ।
ನಿಕ್ಷೇಪವೆನ್ನಿಸದಾ ವಂಶಾವಳಿಗೇ ।
ನಕ್ಷತ್ರ ಮಳಲು ಮಳಿಯ ಹನಿಕಡಲ ತೆರೆ ।
ವೃಕ್ಷ ಜಾತಿಗಳೆಲೆ ಎಣಿಸಬಹುದು ।

ಲಕ್ಷಣವುಳ್ಳ ಪುಣ್ಯಗಣನೆ ಮಾಡುವರಾರು ।
ಅಕ್ಷಯವಾಗುತಿಪ್ಪದು ದಿನದಿನಕೇ ।
ಕುಕ್ಷಿಗೋಸುಗ ಇಲ್ಲಿ ಬಹುಕಾಲವಿದ್ದರೂ ।
ಮೋಕ್ಷಸಾಧನವಲ್ಲ ದುರುಳರಿಗೆ ।
ದಕ್ಷಿಣಾಧೀಶ ಈ ಪರಿ ಇದ್ದವರವೈದು ।
ಶಿಕ್ಷಿಸುವನು ಜನುಮಜನುಮದಲ್ಲಿ ।
ಚಕ್ಷುಶ್ರವಣಶಾಯಿ ವಿಜಯವಿಠಲನಂಘ್ರಿ ।
ರಕ್ಷೆಯಿಂದ ದಾಸನ್ನ ರಕ್ಷಿಸುವ ಉಮೇಶ ೧

## ಮಟ್ಟತಾಳ

ಒಂದು ದಿವಸ ಮುಕುಂದನು ತನ್ನಯ ।
ಮಂದಗಮನೆ ಸಹಿತಾನಂದದಲ್ಲಿ ಖಗೇಂದ್ರವಾಹನನಾಗಿ ।
ಬಂದನು ಸಕಲ ವಸುಂಧರೆ ಚರಿಸುತಲಿ ।
ಅಂದವಾದೀ ಧರೆಯ ಅಂದು ನೋಡಿದನಲ ।
ವಿಂದ ಶಿರಿಯೊಡನೆ ನಿಂದನು ಕರಕಮಲ ।
ದಿಂದ ಗುಲಗುಂಜಿ ಒಂದು ಪಿಡಿದು ಕಾಶಿ ।
ಗಿಂದಧಿಕ ಫಲವುತಂದುಕೊಡುವೆನೆನುತ ।
ನಂದನಗೊಲಿದ ಶ್ರೀ ವಿಜಯವಿಠಲ ಮಾಧವ ।
ನೆಂದೆಂಬೋ ನಾಮದಲಿ ಇಂದ್ರಾದ್ಯರು ಪೊಗಳೆ ೨

## ರೂಪಕತಾಳ

ಶ್ರೀ ತರುಣೇಶನು ವಿನಯದಿಂದಲೀ ಬಂದೀ ।
ಭೂತಳದಲಿ ನಿಂದ ವಾರ್ತಿಯನ್ನು ।
ಭೂತಾಧಿಪನು ನಾರದನಿಂದಲಿ ಕೇಳಿ ।
ಕೌತುಕವಹುದೆಂದು ತಲೆಯದೂಗಿ ।
ಕಾತುರದಲಿ ಹರಿಯಸೇವೆ ಮುಟ್ಟಿಪೆನೆಂದು ।
ಪಾತಾಳೇಶ್ವರನಾಗಿ ಇಲ್ಲಿನಿಂದ ।
ಈ ತೆರದಲಿ ಇತ್ತಲಿರುತಿರೆ ಆಪರ್ನಾ ।

ಭೂತಳಗೋಸುಗ ಹರಿ ವರಹನಾಗೇ ।
ಆತನಾ ದಾಡಿಂದ ಬಂದ ತುಂಗೆ ಇರಲು ।
ಆ ತೀರದಲಿ ಪೋಪನಾಮದಿಂದ ।
ತಾ ತಪವನೆ ಮಾಡತೊಡಗಲಾಕ್ಷಣ ಅತ್ತ ।
ಜಾತವೇದಸನೇತ್ರ ಪ್ರತಿರೂಪದೀ ।
ಚಾತುರ್ಯದಲಿ ಬಲು ಬ್ಯಾಟಿಮಾರ್ಗದಲಿ ।
ಕಿರಾತನಂದದಿ ಬಂದ ಹಂಪನೆನಿಸೀ ।
ಗೋತುರ ಜಾತಿಯ ಕಂಡು ಮಾನವನಂತೆ ।
ಸೋತು ನೀನಾರೆಂದು ಮಾತಾಡಿಸೇ ।
ನೀತವಲ್ಲೆಂದು ಆ ಪಂಪನಾಮಕ ಗಿರಿಜೆ ।
ಭೀತಿ ತೋರಿದಳು ಅನ್ಯರೋಪಾದಿಲಿ ।
ಯಾತಕೆ ಸಂಶಯ ಎನ್ನಲ್ಲಿವುಳ್ಳ ಮಹ ।
ಭೂತಿ ನಿನ್ನದು ಎಂದು ಸತಿಯಾಮದನಾ ।
ರಾತಿ ಒಡಂಬಡಿಸಿ ಪಾಣಿಗ್ರಹಣವ ಮಾಡೆ ।
ಭೂತ ಪ್ರಮಥಗಣ ಪೊಗಳುತಿರೆ ।
ಜೋತಿರ್ಮಯಾರೂಪ ವಿಜಯವಿಠಲರೇಯನ ।
ಮಾತು ಮಾತಿಗೆ ನೆನಿಸಿ ಪುಳಕೋತ್ಸದಲ್ಲಿದೆ ೩

## ಝಂಪೆತಾಳ

ಹರಿಯ ನಿರೂಪದಲ್ಲಿ ಪರಮೇಷ್ಟಿಸುರನಿಕರ ।
ಪರಮ ಹರುಷದಲಿ ನಿಂದಿರದೆ ಬಂದು ।
ನೆರೆದು ಸಕಲರು ವೇದ ಹಿರಿದು ಮಂತ್ರಗಳಿಂದ ।
ಚಿರವಕ್ಕುಮಾಮಹೇಶ್ವರಗೆ ಕಾಶಿಯ ದಳಿದು [?]
ಮೊರಗಿದವು ಭೇರಿ ಅಬ್ಬರಿಸಿ ನಾನಾ ವಾದ್ಯ ।
ಸುರರು ಕುಸುಮ ವರುಷ ಗರಿಯೆ ಮಹೋತ್ಸಹ ದಲ್ಲಿ ।
ಕರಿಸಿಕೊಂಡನು ಪುರಹರನಂದಿನಾರಭ್ಯ ।
ವರ ಪೊಂಪಾರಮಣ ಪೆಸರಿನಿಂದಲಿ ।
ಮೆರೆದುದೀಭೂಮಿ ವಿಸ್ತರದಿಂದ ಪೊಂಪಾಕ್ಷೇ ।

ತುರು ಆದಿಯುಗವಿಡಿದು ಕರಿಸಿತಿದೆಕೊ ।
ಸರಿ ಇಲ್ಲವೆಂದಿದರ ಅರಿದು ಶಂಖಶಕಟ ।
ಶರಭ ಮಾರ್ಕಾಂಡೇಯ ದೇವರತಿ ಕಪಿಲಾ ।
ಪರಿ ಪರಿ ಮುನಿಗಳು ಪರಮ ಸಮಾಧಿಯಲಿ ।
ಹರಿಹರರ ಪೂಜಿಸಿದರು ಗುಣಗಳ ತಿಳಿದು ।
ಸುರಪಾಲ ವಿಜಯವಿಠಲನೆ ಸರ್ವೋತ್ತಮಾ ।
ಅರಿದವಗೆ ಕೈವಲ್ಯ ಸರಿಸದಲೆ ಉಂಟು ೪

## ತ್ರಿವಿಡಿ ತಾಳ

ಪಿತ ಮಹದೇವನು ಅತಿಶಯದಲಿ ಇಲ್ಲಿ ।
ಕೃತವ ಮಾಡಿದನು ಅಮಿತಬಗೆಯಲ್ಲಿ ।
ಕ್ಷಿತಿಯೊಳಿ ಐವರು ಪರ್ವತದೆಡೆಯಲಿ ರಚಿಸಿ ।
ಚತುರಾಸ್ಯ ಪೋಗೆ ಕಾಲತೀತವಾಗಲು ಬಹು ।
ಕ್ಷಿತಿ ಪರಾಳಿದರು ಉನ್ನಲೀಲೆಯಲ್ಲಿ ಅವರು ।
ಗತವಾದ ತರುವಾಯ ಶತ ಮೋದನಂದನನು ।
ಪ್ರತಿವಿಲ್ಲವೆನಿಸಿ ಸುಪುತದ್ವೀಪದೊಳು ಮೆರಿಯೆ ।
ದಿತಿಸುತ ನಿಂದರ್ಕಸುತರೊಡನೆ ವಾಲಿ ।
ಹಿತತಪ್ಪಿ ನಡೆದು ದುರ್ಮತಿಯಲ್ಲಿ ಸಂಚರಿಸೆ ।
ಪತಿತರಾವಣ ವಿಬುಧತತಿಗಳಟ್ಟಲು ಅವರ ।
ಸ್ತುತಿಗೆ ಪುಟ್ಟಿದ ಸಿರಿಪತಿ ದಶರಥನಲ್ಲಿ ।
ಚತುರ ಮಾರುತ ತನ್ನ ಪತಿಸೇವೆ ಗೋಸುಗ ।
ಸುತನಾದಂಜನಿಗೆ ಸಂಗತಿಯೆಲ್ಲ ತಿಳಿದು ।
ಸತಿಪೋದ ವ್ಯಾಜದಲಿ ಕ್ಷಿತಿಪನಲ್ಲಿಗೆ ಬರಲು ।
ನತವಾಗಿ ಭಾಸ್ಕರನಾ ಸುತನ ನೆರಹೆ ವಾಲಿಯ ।
ಹತವಮಾಡಿ ರಘುಪತಿ ಇಲ್ಲಿ ಮೆರೆದ ಪ ।
ರ್ವತ ಮೂಲ್ಯವಂತದಲ್ಲಿ ವ್ರತತೊಟ್ಟ ನರನಂತೆ ।
ನುತಿಸಿ ವರವಬೇಡಿ ಮತಿ ತಾರ ತಮ್ಯದಲಿ ।
ಮತವನ್ನೆ ಬಿಡದೆ ಶಾಶ್ವತ ಫಲವನುದಿನ ।

ಯತಿಗಳ ಮನೋಹರ ವಿಜಯವಿಠಲ ಹರಿಯ ।
ಕೃತದ್ವಂಶಿ ತನ್ನೊಳಗೆ ಪ್ರತಿಕಾಲ ಜಪಿಸುವ ೫

## ಅಟ್ಟತಾಳ

ಮನುಮಥ ಕೊಂಡು ವಶಿಷ್ಟ ಲೋಕ ಪಾ ।
ವನೆ ಅಗಸ್ತ್ಯ ತೀರ್ಥ ಪೊಂಪಾಸಾಗರ ಸೀತಾ ।
ಋಣ ಮೋಚನ ತೀರ್ಥಪೊಳೆವುದು ಸುದರು ।
ಶನ ತೀರ್ಥಕೋಟಿ ಕಪಿಲತೀರ್ಥ ಮಾರ್ಕಾಂಡೇಯಾ ।
ಮುನಿತೀರ್ಥ ನಾನಾ ತೀರ್ಥಂಗಳು ಇಲ್ಲಿ ಉಂಟು ।
ಅನುಮಾನ ಬಿಡಿ ಸಾಧನ ಮಾನವರೆಲ್ಲ ।
ಮನಶುಚಿಯಾಗಿ ನಾನು ನೀನೆಂಬ ಮಾ ।
ತನು ಪೇಳಲಾಗದು ಹಣ ಮಣ್ಣು ಒಂದೆ ಯಾದರೆ ಅಂಗಡಿ[ಗ]ಮ ।
ಣ್ಣನ್ನು ಕೊಟ್ಟು ಉದರಕೆ ತರಬಾರದೇ ಧಾನ್ಯ ।
ನಿನಗೆ ಅವಗೆ ಭೇದಾ ಇಲ್ಲವಾದರೆ ನಿನ್ನಾ ।
ವನಿತೆಯಾ ಮತ್ತೊಬ್ಬ ಹಿಡಿದು ವೈದರೇನು ।
ಗುಣ ಪರಿಪೂರ್ಣವ ಬೊಮ್ಮಗೆ ಪೇಳಿನಿ ।
ರ್ಗುಣನೆಂದು ನುಡಿವುದು ಅಪಸಿದ್ಧಾಂತವು ।
ಜನನಿಯ ಬಳಿಯಲ್ಲಿ ಗರ್ತಿಯೆಂದು ಪೇಳಿ ।
ಜನರ ಮುಂದೆ ಹಾದರಗಿತ್ತಿ ಎಂದಂತೆ ।
ಗುಣವುಂಟು ಗುಣವಿಲ್ಲಾವೆಂದು ಯಮನ ಯಾ ।
ತನೆಯಿಂದ ಬಹುಕ್ಲೇಶವನು ಬಡುವದು ಸಲ್ಲಾ ।
ಕನಸು ಎಂದರೆ ಇದು ಮನಕೆ ತಾರ ಕಾಂಣ್ಯಾ ।
ಕಣಿ ತಂದು ಬಿತ್ತಲು ಜನಿಸುವದೆ ಸಸಿ ।
ಬಿನಗು ಮಾರ್ಗವ ಬಿಟ್ಟು ಗುಣವಂತ ನಾಗಿ ಭ ।
ಜನೆ ಮಾಡು ಸರ್ವತೀರ್ಥವನೆ ಮಿಂದು ವಟತರು ।
ವಿನಲಿ ಗೋತ್ರ ಏಳನು ಉದ್ಧರಿಪದು ।
ಅನಲಾಕ್ಷಗೆ ಬಂದನು ತಂದು ಅಭಿಷೇಕ ।
ವನೆ ಮಾಡಲವನೆ ಧನ್ಯನುಕಾಣೊ ಜಗದೊಳು ।

ಎಣಿಸಲು ಸುತ್ತಯೋಜನ ಕ್ಷೇತ್ರವೆನ್ನಿ ।
ಹನುಮವಂದಿತ ನಮ್ಮ ವಿಜಯವಿಠಲನ ಶ ।
ರಣಗಲ್ಲದೆ ಪುಣ್ಯ ಭಣಗುಗಳಿಗುಂಟೆ ೬

**ಆದಿತಾಳ**

ನರಗೊಂದು ಸೌರಿ ಇಹಪರದಲ್ಲಿ ಹರಿಗೆ ಕಿಂ ।
ಕರನೆನಿಸಿ ಕೊಂಡವ ಹರಿದು ಇಲ್ಲಿಗೆ ಬಂದು ।
ಗಿರಿಸುತ ರಮಣನ್ನ ದರುಶನವನು ಮಾಡಿ ।
ಕರಣ ಶುದ್ಧಿಯಲ್ಲಿ ಸ್ತೋತ್ರಗೈದು ಮತಿಯಲ್ಲಿ ।
ವರ ಪೊಂಪಾಕ್ಷೇತ್ರದ ಅರಸು ಗುಲಗಂಜಿ ।
ಧರ ಮಾಧವಂಗೆ ನೀರೆರದು ಸಮರ್ಪಿಸೆ ।
ಕೊರತೆಯಾಗದಂತೆ ಪರಿಪೂರ್ಣವನು ಮಾಡಿ ।
ಪೊರೆವನು ಯಾತ್ರಿಯ ಚರಿಸದೆ ಮಾನವನು ।
ಹರನು ಪರಮ ಲೌಕಿಕ ಗುರುವೆಂಬೋದೆ ಸಿದ್ಧಾ ।
ಅರಿತವಂಗೆ ಮನಸ್ಥಿರವಾಗಿ ನಿಲ್ಲಿಸುವ ।
ಧರೆಯೊಳಗಿದು ಭಾಸ್ಕರ ಕ್ಷೇತ್ರ ವೆನಿಸೋದು ।
ಸುರರು ಇಲ್ಲಿ ಪ್ಪರು ವಾಸರ ಒಂದು ಬಿಡದಲೆ ।
ಪರಮ ಪುರುಷ ನಮ್ಮ ವಿಜಯವಿಠಲ ಹರಿಯ ।
ಸ್ಮರಣೆ ಮಾಡುತ ಈ ಕ್ಷೇತುರ ಮಹಿಮೆ ತಿಳಿವುದು ೭

**ಜತೆ**

ಜನುಮದೊಳಗೆ ಒಮ್ಮೆ ಪಂಪಾಕ್ಷೇತ್ರದ ಯಾತ್ರಿ ।
ಮನಮೆಚ್ಚಿ ಚರಿಸಲು ವಿಜಯವಿಠಲ ಒಲಿವಾ ೮

## ೯೯. ಹಂಪೆ

### ರಾಗ: ಸಿಂಧುಭೈರವಿ

### ಧ್ರುವತಾಳ

ಯಂತ್ರೋದ್ಧಾರಕ ಹನುಮಾ ಸುರಸಾರ್ವಭೌಮಾ ।
ಯಂತ್ರ ಧಾರಕ ಎನಗೆ ಮನಸಿನೊಳಗೆ ।
ಯಂತ್ರ ವಾಹನನ ಪೂರ್ಣದಯದಿಂದ ಸಕ ।
ಲಾಂತರಿಯಾಮಿಯಾಗಿ ಚರಾಚರದಿಲ್ಲೀ ।
ತಂತ್ರವನು ನಡಿಸುವ ಮಂತ್ರಿ ಈತನು ಕಾಣೊ ಸ್ವಾ ।
ತಂತ್ರ ಪುರುಷ ವಿಜಯವಿಠಲನ್ನ ನಿಜ ಭಕ್ತ ।
ಅಂತ್ರವಿಲ್ಲದ ತನ್ನ ಸ್ತುತಿಪರನ್ನ ಪೊರೆವ ೧

### ಮಟ್ಟತಾಳ

ವ್ಯಾಸರಾಯರು ತಮ್ಮ ಮೀಸಲ ಮನದಲ್ಲಿ ನಿಜ ।
ದ್ಯಾಸನ ಧ್ಯಾನದಲಿ ಶ್ರೀಶನ ಪೂಜಿಸಲು ।
ಆ ಸಮಯದೊಳು (ನೀ) ಸುಳಿದು ನಿಂದು ।
ಈ ಶಿಲೆಯೊಳಗೆ ಪ್ರಕಾಶ ಮಾನವಾಗೆ ।
ತ್ರಿಸಾಮಾ ವಿಜಯವಿಠಲವ ಸೇವೆ ಹಾ ।
ರೈಸಿ ಇಲ್ಲೆ ಮೆರದೆ ದಾಸರನ ಪೊರದೆ ೨

### ತ್ರಿವಿಡಿತಾಳ

ಮೂರುಕೋಟಿ ಬೀಜಾಕಾರಾ ಮಂತ್ರವ ಜಪಿಸಿ ।
ಧಾರಿಯನು ಎ[ರೆ]ದು ನಿನ್ನಯ ಸುಂದರ ।
ಮೂರುತಿಯನು ನಿರ್ಮಾಣವನು ಮಾಡಿದರು ।
ಆರುಕ್ಷೋಣಿ ವಲಯಾ ಕಾರಾ ವಾನರ ಬದ್ಧ ।
ಚಾರು ಶೋಭಿತ ತುಂಗಾತೀರದಲ್ಲಿ ವಾಸ ।
ವೀರಾ ವಿಜಯವಿಠಲನ್ನ ।
ಕಾರುಣ್ಯದ[ಲೀ]ಗನುಗುಣ್ಯವಾಗಿ ನಿಂದೆ ೩

### ಅಟ್ಟತಾಳ

ಒಂದು ಕೋಟಿ ಬೀಜ ಮಂತ್ರ ।
ದಿಂದ ಸುತ್ತ ಯಂತ್ರವ ಬರಿಸಿ ।
ಅಂದು ಪ್ರಾಣ ಪ್ರತಿಷ್ಠೆಯ ಮಾಡಿ ।
ನಿಂದಿರಿಸಿದರು ನಿನ್ನ ಮಂದಹಾಸದಿ ವ್ಯಾಸ ಮುನಿಗಳು ।
ಒಂದು ಕರದಲಿ ಜಪಮಾಲೆ ।
ಒಂದು ಕರಾ ನಾಭಿ ಕೆಳಗೆ ।
ಚಂದದಿಂದ ಪದು ಮಾಸನ ।
ದಿಂದ ಕುಳಿತು ನಿತ್ಯ ನಿತ್ಯಾ ।
ನಂದ ವಿಜಯವಿಠಲನ್ನ ।
ವಂದಿಸಿ ವರಗಳ ಕೊಡುತ ।
ಬಂದ ನರರ ಪಾಲಿಸುತ್ತ ೪

### ಆದಿತಾಳ

ಭೂತ ಪ್ರೇತ ಪಿಶಾಚ ಪೀಡೆ ।
ವಾತ ಶೀತ ಜ್ವರ ಮಿಕ್ಕಾದ ।
ಯಾತನೆ ನಾನಾ ಕಠಿಣ ಭೀತಿ ಮತ್ತೆ ।
ಯಾತರ್‍ಯಾತರರ್ಥಪೇಕ್ಷಿತ ತೆರದಲೆ ।
ಆತುರದಿಂದಲೆ ಕೊಟ್ಟು ಪಾತಕವ ಹರಿಸಿ ।
ಭೂತಭೃತೆ ವಿಜಯವಿಠಲನ ।
ದೂತರೊಳು ಶ್ರೇಷ್ಠನೀತಾ ೫

### ಜತೆ

ವ್ಯಾಸಮುನಿ ಪೂಜಿಪ ಯಂತ್ರೋದ್ಧಾರಕ ಹನುಮಾ ।
ಈಶಾನಾ ವಿಜಯವಿಠಲನ ದಾಸರ ಪ್ರೇಮಾ ೬

## ೧೦೦. ಹರಿಹರ

### ಧ್ರುವತಾಳ

ವಿಹಂಗಗಮನ ದೇವ ವಿಶ್ವಸರ್ವದ ಕಾವ ।
ಅಹಿಶಯ್ಯಾ ಕಾಮನಯ್ಯಾ ಭಕು[ತ]ಪ್ರಿಯ ।
ಬಹು ಕ್ರೂರ ರೂಪ ಭವದೂರ ಫಾಲಲೋಚನ ಚನ್ನ ।
ಅ[ಹಿ]ಭೂಷಣಗೆ ಈಶ ಸತತ ದಯಾಸಾಗರ ।
ಗಹನಮಹಿಮ ಸದ್ಗುಣಗಣ ಸಾಂದ್ರ ಸ ।
ನ್ನಿ ಹಿತನಾಗಿಪ್ಪ ದೇವೋತ್ತುಂಗಾ ಸಂಗ ।
ಮಹದೇವ ಜ್ಞಾನಕಾಯಾ ಶಿವಮೂರ್ತಿ ಶುದ್ಧಮೂರ್ತಿ ।
ಬಹಿರಂತರ ನಿತ್ಯವ್ಯಾಪ್ತ ನಿತ್ಯ ತೃಪ್ತ ।
ಮಹಿಯೊಳು ಈ ಕ್ಷೇತ್ರ ಸುತ್ತು ಮೂರುಯೋಜನ ।
ಸಹ ಜವೋ ಹರಿಹರವೆಂಬೋ ಪೆಸರೂ ।
ಗುಹಶಯನನಾದ ನಮ್ಮ ವಿಜಯವಿಠಲ ರೇಯಾ ।
ಮಹಿಧರನಂದನೆ ವಾಸವಿಲಾ ಸ ೧

### ಮಟ್ಟತಾಳ

ಅಸುರ ಗುಹನಂದು ಪಸರಿಸಿ ತಪವನೊ ।
ಅಸುವ ದಂದಿಸಿ ಮಹ ಪೆಸರಾಗೆ ನಿರುತದಲಿ ।
ಬಿಸಿಜ ಭವನು ಮೆಚ್ಚಿ ನಸುನಗುತ ಖಳಗೆ ।
ಅಸುರಾರಿ ಹರನಿಂದ ಅಸುವಳಿಯಾದಂತೆ ।
ಕುಶಲ ವರವನೀಯೆ ವಸುಧಿಯೊಳಗೆ ಇತ್ತಾ ।
ಮಸದು ಮತ್ಸರಿಸಿ ಅಂಜಿಸಿದಾ ಲೋಕೇಶ್ವರರ ।
ಅಸಮ ವೀರನಾಗಿ ವಶವಲ್ಲದ ಸು[ಮಾ]ನ ।
ಸಿರು ಮೊರೆ ಇಡಲು ।
ಪಶುಪತಿ ಪ್ರೀಯಾ ಶ್ರೀ ವಿಜಯವಿಠಲರೇಯಾ ।
ಬೆಸಸಿದ ಮಾತಿಗೆ ವಸುಧಿಯೊಳಗೆ ಮೆರೆದ ೨

### ತ್ರಿವಿಡಿತಾಳ

ಮೂರು ಯೋಜನ ಉದ್ದ ಹರಿಹರ ರೂಪದಲಿ ತೋರಿ ।
ಕ್ರೂರನ ಕೂಡ ಕಾಳಗವನು ಮಾಡಿ ।
ಸಾರಿಸಾರಿಗೆ ನಾನಾ ಶಸ್ತ್ರದಲಿ ಕಾದಿ ।
ಧಾರುಣಿಗೆ ಖಳನ ಬೀಳಗೆಡಹೀ ।
ಕಾರುಣ್ಯದಲ್ಲಿ ಅವಗೆ ವರವಿತ್ತು ಕ್ಷೇತ್ರ ಗು ।
ಹಾರಣ್ಯ ವೆನಿಸಿ ಕರಿಸಿತಿದೆಕೋ ।
ವಾರಾಣಾಸಿ ಕ್ಷೇತ್ರಗಧಿಕ ವೆಂದೆನಿಸಿತು ।
ನಾರಾಯಣಾ ಸರ್ವಗುಣ ಪೂರ್ಣನೂ ।
ಚಾರುವಾದಾ ಗಿರಿ ಪೋಲ್ವಾತ್ತೈರಾವತ ।
ಈಶಾ ಶೋಭಿಸುತಿರೆ ತೀರ್ಥ ಸಹಿತಾ ।
ವಾರಾಣವಾದ ಭೃಕುಟಿ ಮುಚುಕುಂದ ಕ್ಷೇ ।
ತುರದಲ್ಲಿ ಈಶಾ ಬಪ್ಪುತಿಹನೂ ।
ಈ ರೀತಿಯಲಿ ಉಂಟು ಪೂರ್ವಾದಿ ದಿಕ್ಕಿಲಿ ।
ಆ ರೈದು ಕೇಳ್ವುದು ಪುಣ್ಯಶ್ರವಣ ।
ಭೋರುಗರೆವ ಸರಿತೆ ಹರಿದ್ರ ಕುಮದ್ವತಿ ।
ವಾರಾಹಿಯೊಳಗೆ ಸಂಗಮವೆನ್ನಿರೋ ।
ಕೋರಿದವರಿಗೆ ಆನಂದ ವರವ ನಿತ್ತು ।
ತಾರಕಾ ಮಾಳ್ವರು ಭವಸಾಗರ ।
ಕಾರುಣ್ಯನಿಧಿ ಹರಿಹರ ವಿಜಯವಿಠಲಾ ।
ಆರಾಧಿಲು ಮುತ್ತಿದಾರಿಯಾ ತೋರುವಾ ೩

### ಅಟ್ಟತಾಳ

ಪರಮೇಷ್ಠಿ ಬಂದು ಹರಿಹರರೂಪವ ।
ಧರಿಸಿದ ದೇವನ ವಿಶ್ವಕರ್ಮನಿಂದ ।
ನಿರಮಾರ್ಣಗೈಸಿಪ ಶೂಲ ಅಭಯ ಹಸ್ತ ।
ಅರಿಶಂಖದಿಂದ ಚತುರ ಹಸ್ತಾದಲ್ಲಿ ।

ಹರುಷವ ತಾಳಿ ಕೊಂಡಾಡಿ ಧನ್ಯನಾಗಿ ।
ಸುರರಿಗರುಹಿದ ಇದರ ಮಹಿಮೆಯನ್ನು ।
ಮಿರುಗುವ ತೀರ್ಥಗಳಿಲ್ಲುಂಟು ಬಹು ಪೆ ।
ಸರನು ಪೇಳುವೆ ಕೇಳುವುದು ಸಜ್ಜನರು ।
ಪರಮೇಷ್ಠಿ, ಭಾರ್ಗವ, ಛಾಯಾ, ಪಿತರ, ವೈಶ್ವಾ ।
ನರ, ರುದ್ರಪಾಷಂಡ, ಶಿಲಿ, ಶಿಂಶುಮಾರ ।
ಅರಿಪಿಶಾಚಿ, ವಿಶ್ವಾಮಿತ್ರ, ಗಾಲವ, ವಿ ।
ಸ್ತರವಾದ ಸಂಗಮ, ಸರಸ್ವತಿ, ಭೈರವ ।
ನರ ಋಣಮೋಚನ ಈ ಪರಿ ತೀರ್ಥವು ।
ಪರಿಪರಿ ಉಂಟು ಪೆಸರು ಬಲ್ಲವರಾರು ।
ನರನೊಮ್ಮೆ ಬಂದು ಸ್ನಾನ ಮಾಡೆ ಮತ್ತೆ ಕು ।
ಳ್ಳಿ[ರ]ದೆ ವಟಾಶ್ವತ್ಥ ತರುವಿನ ನೆಳಲಲಿ ।
ಕರವ ಮುಗಿದು ಮಾಡಿದಾ ನಿತ್ಯ ನೈಮಿತ್ಯ ।
ಹರಿಹರಗರ್ಪಿತವೆಂದು ನುಡಿದರೆ ।
ದುರಿತಗಳುವಕಿ ಪುಣ್ಯ ಶರಧಿಯೊಳು ।
ತೆರಹಿಲ್ಲದೆ ಲೋಲಾಡುವರು ।
ಧರಿಯೊಳಗಿದಕ್ಕೆಲ್ಲಿ ಎದುರುಗಾಣೆನು ಹರಿ ।
ಹರರೂಪಾ ವಿಜಯವಿಠಲ ಪರಬೊಮ್ಮನು ।
ಹರ ರೂಪಾ ತಾನೆ ಮತ್ತಾವನು ತಾಳಿದ? ೪

**ಆದಿತಾಳ**

ಭೇದ ಜ್ಞಾನದಿಂದ ಆವರಿಸಿ ತಿಳಿದು ।
ಸಾಧು ಗಳೊಡನೆ ಪ್ರಸಾದ ಮನಸಿನಲ್ಲಿ ।
ಕ್ರೋಧವ ತೊರೆದು ಸಂಪಾದಿಸಿ ಭಕ್ತಿಪೂರ್ಣ ।
ಬೋಧರ ಮತವಿಡಿದು ವೇದ ಶಾಸ್ತ್ರ ಸಮ್ಮತ ।
ವಾದದ್ದೆ ಪತಿಕರಿಸಿ ಮೋದಾದಿಂದಲಿ ನಲಿದು ।
ಗೋದಾವರಿ ಗಂಗೆ ಆದಿತ್ಯಸುತೆ ಮೊದ ।
ಲಾದ ಕ್ಷೇತ್ರಕೆ ನಿಲ್ಲಾದೆ ನೂರುಸಾರಿ ।

ಪೋದರೇನಯ್ಯಾ ಇಲ್ಲಿ ತಾ ಧರ್ಮಧರಿಸಿ, ಬಿಂ ।
ದೋದಕ ದಿಂದ ಮಹತ್ತಾದ ಫಲವೀ[ವು]ದು ।
ಮಾಧವ ಶಿರಿಧ[ರ] ವಿಜಯವಿಠಲ ವಿ ।
ನೋದ ಮೂರುತಿ ಕ್ರೀಡೆ ಆದಿತ್ಯರು ಬಲ್ಲಾರೆ ೫

ಜತೆ

ಎಂತು ಗ್ರಹಿಸಾಲಾರದಂತೆ ತೋರುವ ಹರಿ ।
ದಂತಿ ಚರ್ಮಾಂಬರ ವಿಜಯವಿಠಲರೇಯಾ ೬

## ೧೦೧. ಹರಿಹರ

### ಧ್ರುವತಾಳ

ಹರಿಹರರಿಬ್ಬರು ಒಂದೇ ರೂಪವ ಧರಿಸಿ ।
ದುರುಳ ಗುಹಾಸುರನ ಕೊಂದರೆಂದೂ ।
ಮರಳು ಮಾನವರು ತಿಳಿಯಾದೆ ನುಡಿವರು ।
ಹರಿಹರರೀರ್ವರು ಏರವಾದರೆ ಅಂದು ।
ಹರನು ಮೈಮರೆದು ನಿಂದನ್ಯಾತಕೆ ।
ಧಾರುಣಿಯೊಳಗೆ ಹಿರಣ್ಯಕಶಿಪು ದೈತ್ಯ ।
ಸುರರ ಓಡಿಸಿ ಪ್ರಬಲನಾಗಿರೆ ।
ಪರಮ ಪುರುಷ ಹರಿ ನರಹರಿರೂಪವನ್ನು ।
ಧರಿಸಿ ರಕ್ಕಸನ್ನ ಕೊಲ್ಲುವಾಗಲಿ, ಕೇ ।
ಸರಿಯಾ ಬಳಿಗೆ ಪೋಗಿ ಮಾರೆಯಾ ಬೇಡಿಕೊಂಡು ।
ಮೆರದಾನೇನೋ ಅವತಾರ ಮಾಡಿ ।
ಹರಿಯ ಅದ್ಭೂತ ಶಕ್ತಿ ನಾನಾ ಲೀಲಾ ವಿನೋದ ।
ಚರಿಸೂವ ಪರಬೊಮ್ಮ ಗುಣಪೂರ್ಣ ನೂ ।
ತುರಗವದನ ಮತ್ಸ್ಯಕೂರ್ಮಸೂಕರ ವೇಷ ।

ಧರಿಸಿದಾತನು ಕಾಣೋ ಯುಗಯುಗದೀ ।
ಕರುಣಾಸಿಂಧು ನಮ್ಮ ವಿಜಯವಿಠಲರೇಯಾ ।
ಹರಿಹರ ರೂಪ ಧರಿಸಿದ ಕಾಣಿರೋ ೧

### ಮಟ್ಟತಾಳ

ದೀಪದ ಉಪಕಾರ ದಿನಪಗೆ ಏನಾಹದು ।
ಭೂಪತಿಗಾಳಿನ ಅನುಸುಣ್ಯಾತಕೆ ।
ಕೋಪವನು ತಾಳಿ ಭೃಗುಮುನಿ ಕೈಯಿಂದ ।
ಶಾಪನ ಕೈಕೊಂಡನಂದು ಭಸ್ಮಾಸುರನ ।
ಆ ಪತ್ತಿಗಾರದೆ ಮೊರೆ ಇಡಲು ಕೇಳಿ ।
ಶ್ರೀಪತಿ ಮೊಗದಲಿ ಕಾಯದದ್ದು ಕಾಣದೆ ।
ಗೋಪಾಲ ವಿಜಯವಿಠಲ ಹರಿಹರ ।
ರೂಪವು ತಾನಾದ ಅನೇಕ ರೂಪನೊ ೨

### ತ್ರಿವಿಡಿತಾಳ

ಕಂತು ಜನಕ ಶಿವನ ಬೇಡಿಕೊಂಡದ್ದು ಪುರಾ ।
ಣಾಂತರದಲ್ಲಿ ಪೇಳುತಿವೆ ನೋಡಿಕೊ ।
ಎಂತಾಹದೀ ನುಡಿ ಸಿದ್ಧವಲ್ಲವೊ ಶ್ರೀ ।
ಕಾಂತ ನಖ ಮೌಳಿ ಅಭೇದಾನು ।
ದಂತಿ ದನುಜ ವೈರಿ ಅರ್ಧಂಗವನೆ ತಾಳಿ ।
ನಿಂತಿಪ್ಪ ಶ್ರೀ ಹರಿಯಾ ಕೂಡಾ ।
ನಂತಾ ಕಲ್ಪರೆ ನಿಗಮಾ ಗೋಚರ ಸರ್ವ ।
ಸ್ವತಂತ್ರನು ಒಬ್ಬಾರ ಹಂಗಿಗಾನೆ ।
ಚಿಂತಾಮಣಿಯಾ ಬಳಿಯಾ ನಾಡ ಹರಳನೆ ತಂದು ।
ಸಂತತವಿಟ್ಟರೆ ಸರಿಯಾಗೋದೆ ।
ಸಂತೋಷ ಪೂರ್ಣಗೆ ದೈತ್ಯನ ಕೊಲ್ಲುವುದಕೆ ।

ಚಿಂತೆಮಾಡಿದನೆಂಬೊ ವಾರ್ತಿಯೇನೊ ।
ಭ್ರಾಂತರಿಗೆ ನಿತ್ಯ ಮೇಹಕವನೆ ತೋರಿ ।
ಅಂತು ಗಾಣದ ನರಕಕ್ಕೆ ಹಾಕೂವ ।
ದಂತಿ ವರದ ದೇವ ವಿಜಯವಿಠಲ ಜಗ ।
ದಂತರಿಯಾಮಿಗೆ ಅಸಾಧ್ಯ ಬಂದಿಲ್ಲ ೩

### ಅಟ್ಟತಾಳ

ಹರಗೆ ಈ ಪ್ರತಿಪ ಉಳ್ಳರೆ ಭಸುಮಾ ।
ಸುರಗಂಜಿ ಹರಿಗೆ ಮೊರೆ ಇಡುವನೇನೊ ।
ಜರಸಂಧನಿಗೆ ಇತ್ತಾವರ ಮತ್ತೇನಾಯಿತು ।
ಮರಳಿ ರಾಮನಕೂಡ ಶರಧನು ಪಿಡಿದು ಮೈ ।
ಮರೆದು ನಿಂದದ್ದು ಸರ್ವ ಜಗ ವೆಲ್ಲ ಬಲ್ಲದು ।
ಕರಿ ರಾಜಾ ಆ ಮೂಲಾವೆಂದು ಕರೆವಾಗ ।
ಪರಮೇಷ್ಠಿ ಶಿವನೊ ಮತ್ತಾವನೊ ಕಾಯ್ದವ ।
ಸುರರೊಳಗೀತಾ ಗಿಂದಧಿಕ ದೇವರು ಇಲ್ಲಾ ।
ಹರಿಹರರೂಪಾ ಶ್ರೀ ವಿಜಯವಿಠಲರೇಯಾ ।
ಚರಿತೆಯ ತೋರುವ ಅವರ ಯೋಗ್ಯತಾದಷ್ಟು ೪

### ಆದಿತಾಳ

ತ್ರಿಶೂಲ ಡಮರುಗ ಭಸಿತ ರುದ್ರಾಕ್ಷಿಯು ।
ಪಶುವಾಹನನಾಗಿ ಇಪ್ಪದಿದೆ ।
ಅಸುರಾರಿಯಲ್ಲದೆ ಅನ್ಯರೂಪಗಳಲ್ಲ ।
ಹಸನಾಗಿ ತಿಳಿದು ಈತನ ಮಹಿಮೆ ಕೊಂಡಾಡಿ ।
ಕೆಸರು ಕಸ್ತೂರಿಯಾದರೆ ಕೌತುಕವಲ್ಲವೇನೊ ।
ಶಶಿಧರ ಹರಿರೂಪ ದೊ[ಳು]ಕೂಡುವನೆ ।
ವಶವಾಗಿ ಇಪ್ಪನು ತದ್ರೂಪಾದಂತೆ ಕಾಣೊ ।
ಕುಶನ ಬಯಸುವನು ಸಮನಾಗಿ ನಿಲ್ಲುವನೆ ।

ಪಶುಗಳ ಕಾಯ್ದ ನಮ್ಮ ವಿಜಯವಿಠಲ ಪ ।
ರಶುರಾಮ ಕ್ಷೇತ್ರದಲಿ ಹರಿಹರ ರೂಪನಾದಾ ೫

**ಜತೆ**

ತುಂಗಮಹಿಮೆ ದೇವೋತ್ತುಂಗಾ ತುಂಗಾವಾಸ ।
ರಂಗ ವಿಜಯವಿಠಲ ಹರಿಹರ ಮೂರುತಿ ೬

ಆಂದೋಳ – ಪಲ್ಲಕ್ಕಿ
ಆರ್ಜವ – ಪ್ರಾಮಾಣಿಕತೆ
ಆರ್ಜವಮಾರ್ಗ– ವಾಯುಮಾರ್ಗ
ಆನನಚತುಷ್ಟ – ಬ್ರಹ್ಮ
ಅನಿರ್ಜರ – ಸರ್ವದೇವತೆಗಳು
ಆಯತ – ಸರಿಯಾದ
ಆರಾಮ – ತೋಟ
ಆವಹ – ಯುದ್ಧ
ಈಡಾರು – ಸಮಾನರಾರು
ಈರಾರು – ಹನ್ನೆರಡು
ಈರೈದು – ಹತ್ತು
ಈಷಣತ್ರಯ – ದಾರೇಷಣ, ವಿತ್ತೇಷಣ, ಪುತ್ರೇಷಣ ಎಂಬ ಮೂರು ಮೋಹಗಳು
ಉದಧಿ – ಸಮುದ್ರ
ಉಪಟಳ – ತೊಂದರೆ
ಉಪಹತಿ – ತೊಂದರೆ
ಉಮ್ಮಳಿಕೆ – ದುಃಖ
ಕಂಜ – ಕಮಲ
ಕಂಧರ – ಕೊರಳು
ಕಂಬು – ಶಂಖ
ಕನಕಗಿರಿ – ತಿರುಪತಿಯ ಬೆಟ್ಟ
ಕಪೋಲ – ಕೆನ್ನೆ
ಕಮಠ – ಕೂರ್ಮ
ಕರ್ಪದ – ಬಟ್ಟೆ
ಕರಿವಾರಿಜ – ಕೈ ಎಂಬ ಕಮಲ
ಕಲಿಹನ – ಕಲ್ಕಿ (ವಿಷ್ಣು)
ಕಲ್ಲಿಬೋನಾಸವಿದು – ಕಲ್ಲು ಮಣ್ಣನ್ನು ತಿನ್ನುವುದು – ಕೃಷ್ಣ
ಕಳಸಜ – ದ್ರೋಣ
ಕಾಂಚನ – ಬಂಗಾರ
ಕಾಂಬೆದಾಮ – ಬಂಗಾರದ ಉಡುದಾರ
ಕಾರ್ಮುಕ – ಬಿಲ್ಲು
ಕಾಲಗೆ – ಯಮನಿಗೆ
ಕಾಲುಗಗ್ಗರಿ ಪೆಂಡ – ಕಾಲಿಗೆ ಹಾಕಿಕೊಳ್ಳುವ ಬಿರುದಾವಳಿಯ ಆಭರಣ
ಕಾಶಿ – ಹೊಳಪು; ಕಾಣಿಸಿಕೊಳ್ಳುವುದು
ಕೀಲಿಸಿದ – ಕೂಡಿಸಿದ
ಕುಂಜರಿ – ಆನೆ
ಕುಂಭಿಣಿ – ಭೂಮಿ
ಕುಶನ – ದರ್ಭೆಯ; ನೀರಿನ
ಕುಶಿಯಣುಗೊತ್ತಿ– ನೆಲಕ್ಕೆ ಒತ್ತಿ
ಕುಕ್ಷಿತೋದ – ಕೊಳೆನೀರು
ಕೃಶಾನು ನೇತ್ರ – ಶಿವ
ಕೇಶಿಖಳ ಮರ್ದನ – ಕೇಶಿ ಎಂಬ ರಾಕ್ಷಸನನ್ನು ಕೊಂದವನು – ವಿಷ್ಣು
ಕೈಟಭಾರಿ – ಕೈಟಭ ಎಂಬ ರಾಕ್ಷಸನ ಶತ್ರು – ವಿಷ್ಣು
ಕೈದು – ಕತ್ತಿ
ಕೈವಲ್ಯ – ಮೋಕ್ಷ
ಕೊಪ್ಪಿಲಿ – ಬಿಲ್ಲಿನ ತುದಿಯಲ್ಲಿ
ಕ್ರತು – ಯಾಗ
ಕ್ರಯವಾಗ– ಗೊಡದಂತೆ – ಮಾರಾಟವಾಗಲು ಅವಕಾಶ ಕೊಡದೆ (ಮಾನ ಹರಾಜಿಸಿ ಹೋಗದಂತೆ)

ಕ್ಷುಧಾ - ಹಸಿವು
ಕ್ರೋಶ - ಮೂರು ಮೈಲಿ
ಕ್ಷೋಣಿ - ಭೂಮಿ
ಖೇದಿಗೆ - ದುಃಖವನ್ನುಂಟು ಮಾಡುವವನು
ಖದ್ಯೋತ - ಮಿಂಚುಹುಳ
ಖ್ಯಾಳಮ್ಯಾಳ - ತಲೆಬುಡ
ಖಲ್ಲರರಿ - ದುಷ್ಟರ ಶತ್ರು - ಕೃಷ್ಣ
ಗರಳ - ವಿಷ
ಗಾತುರ - ಗಾತ್ರ - ದೇಹ
ಗೀರ್ವಾಣ - ದೇವತೆ
ಗುಣವಲ್ಲಿ - ಗುಣದ ಬಳ್ಳಿ
ಗುಣವಾತ - ಗುಣಸಮೂಹ
ಗೂಡೆ - ಬುಟ್ಟಿ
ಗೋವಳೇಶ - ಕೃಷ್ಣ
ಗ್ರಂಥಿ - ಗಂಟು (ಕರ್ಮದ ಗಂಟು)
ಘಣಮಣಿಸಿದ - ಚೆನ್ನಾಗಿ ಸೋಲಿಸಿದ
ಘಸಣಿ(ನಿ) - ತೊಂದರೆ
ಚಂಡ - ತೀಕ್ಷ್ಣ
ಚಕ್ಷುಶ್ರವಣಶಾಯಿ- ಶೇಷಶಾಯಿ
ಚತುರಾಸ್ಯ - ಬ್ರಹ್ಮ
ಚರಣಾಂಬು - ಪಾದತೀರ್ಥ
ಚಾಣೂರಾರಿ - ಚಾಣೂರ ಎಂಬ ರಾಕ್ಷಸನ ಶತ್ರು-ಕೃಷ್ಣ
ಚಾಪ - ಬಿಲ್ಲು
ಚಾಮಿಕರ - ಬಂಗಾರ
ಚಾರು - ಸುಂದರ
ಚಿಲ್ಲಿಕ - ಗಂಭೀರ ದೂರವಾದ - ನೀಚವಾದ
ಚೂಣಿ - ಮೊದಲು

ಚೂತತರು - ಮಾವಿನಮರ
ಛವಿ - ಕಾಂತಿ
ಜಂಘೆ - ಕೆಳಗಿನತೊಡೆ
ಜಂಭಭೇದಿ - ಜಂಭಾರಿ - ಇಂದ್ರ
ಜಡಿತಾಭರಣ - ಆಭರಣದಿಂದ ತುಂಬಿದ
ಜತ್ತಾಗಿ - ಎಚ್ಚರದಿಂದ
ಜಲಜಾಪ್ತ - ಸೂರ್ಯ
ಜಾಂಗುಲಿ - ವಿಷ ಚಿಕಿತ್ಸೆ
ಜಾತವೇದಸನೇತ್ರ-ಅಗ್ನಿನೇತ್ರ - ಶಿವ
ಜಾನು - ಮೊಳಕಾಲು
ಝಷಕೇತನನಯ್ಯ- ಮನ್ಮಥನ ತಂದೆ - ವಿಷ್ಣು
ಡುಳ್ಳಿಮನ - ಸುಳ್ಳು ಮನಸ್ಸು
ತರಣಿ - ಸೂರ್ಯ
ತರಳಭಕ್ತಿ - ಅಲ್ಪಭಕ್ತಿ
ತಾತ - ತಂದೆ
ತಿರ್ಮಲ - ತಿರುಮಲ
ತಿಮಿರ - ಕತ್ತಲೆ
ತಿರೋಭಾವ - ಹಿಂದೆ
ಹೋಗುವುದು - ಮರೆಯುವುದು
ತುಂದಿಯಿಂದಲಿ- ಹೃತ್ಪೂರ್ವಕವಾಗಿ (ಹೃದಯತುಂಬಿ)
ತುತಿಸು - ಹೊಗಳು
ತುಲಾಭಾರ - ಮನುಷ್ಯನೊಬ್ಬ ತಕ್ಕಡಿಯಲ್ಲಿ ಕುಳಿತು ತನ್ನ ಭಾರಕ್ಕೆ ಸಮನಾದ ವಸ್ತುವನ್ನು ದಾನಮಾಡುವ ಕಾರ್ಯ
ತೃಣತಲ್ಪ - ಹುಲ್ಲನ್ನು

ಹಾಸಿಗೆಯನ್ನಾಗಿ ಮಾಡಿಕೊಂಡವನು – ರಾಮ

ತೆತ್ತಿಗ – ಸೇವಕ – ಭಕ್ತ – ದಾಸ

ತೆತ್ತೀಸ ಕೋಟೆ – ಮೂವತ್ತಮೂರು ಕೋಟೆ

ತೋಡ – ಒಂದು ಆಭರಣ

ತೋಷ – ಆನಂದ

ತ್ರಿದಶ – ದೇವತೆ

ದಂತಿಚರ್ಮಾಂಬರ – ಶಿವ

ದನುಜ – ರಾಕ್ಷಸ

ದಮುನಾಮ – ಅಗ್ನಿನಾಮಕ ಪರಮಾತ್ಮ

ದಮೆ – ಇಂದ್ರಿಯ ನಿಗ್ರಹ

ದರ – ಶಂಖ

ದವಿಧ ಭೂತಸ್ಥ– ಪ್ರತಿಬಿಂಬ

ದಶನ – ಹಲ್ಲು

ದಾರಿಗೂ – ಯಾರಿಗೂ

ದಿಗ್ದಂತಿ – ದಿಕ್ಕಿನ ಭಾರವನ್ನು

ಹೊರುವ ಆನೆ – ಮಹಾಪಂಡಿತ

ದುಗ್ಧಾಬ್ಧಿ – ಕ್ಷೀರಸಮುದ್ರ

ದುಮ್ಮಾನ – ದುಃಖ

ದುರಿತ – ಪಾಪ

ದೈತ್ಯವಿದಾರಣ – ರಾಕ್ಷಸ ಸಂಹಾರಕ

ದೈತೇಯ – ರಾಕ್ಷಸ

ದ್ಯುತಿ – ಕಾಂತಿ

ದ್ಯುನಾಥ – ದೇವತೆಗಳ ಒಡೆಯ – ಇಂದ್ರ

ಧಾತ – ಬ್ರಹ್ಮ

ಧುರ – ಯುದ್ಧ

ನಕ್ತೇಶ – ಚಂದ್ರ

ನಖ – ಉಗುರು

ನಗ – ಬೆಟ್ಟ

ನದ – ನದಿಯ ಪುಲ್ಲಿಂಗರೂಪ (ಉದಾ: ಬ್ರಹ್ಮಪುತ್ರ)

ನಮಿತರು – ವಂದನೆಯನ್ನು ಪಡೆಯುವವರು

ನರ – ಮನುಷ್ಯ

ನಾಗಾಗಿರಿ – ಶೇಷಾದ್ರಿ (ತಿರುಪತಿಯಬೆಟ್ಟ)

ನಾಗಾರಿ – ಗರುಡ

ನಾರಿಯರಧರ – ಹುಡುಗಿಯರ ತುಟಿ

ನಿಕರ – ಸಮೂಹ

ನಿಗಮಾಸನ್ನ – ವೇದಕ್ಕೆ ಹತ್ತಿರವಾದವನು

ನಿಗಳ – ಸರಪಣಿ

ನಿರ್ಜರರು – ದೇವತೆಗಳು

ನಿಬ್ಬರ – ವೇಗ

ನಿರಯ – ನರಕ

ನಿರಯದುರ – ಪುಣ್ಯವಂತ

ನಿವಹ – ಗುಂಪು

ನಿರ್ವಾಣ – ಮೋಕ್ಷ

ನಿಶ್ಶಾಂತ – ಅಶಾಂತ

ನಿವೀದರವಿನ

ವರವೆಗ್ಗಳ – ನೀನು ಕೊಟ್ಟ ಜ್ಞಾನವೆಂಬ ವರ ದೊಡ್ಡದು

ನೇಣು – ಹಗ್ಗ

ನೊಸಲು – ಹಣೆ

ಪಂಚ ಪಂಚ

ಕ್ರೋಶ - ಇಪ್ಪತ್ತೈದು ಕ್ರೋಶ (೭೫ ಮೈಲಿ)
ಪಂಚಮಹಾಪಾತಕ -ಚಿನ್ನವನ್ನು ಕದಿಯುವುದು; ಹೆಂಡವನ್ನು ಕುಡಿಯುವುದು ಗುರು ಪತ್ನೀ ಗಮನ, ಬ್ರಹ್ಮಹತ್ಯೆ ಹಾಗೂ ಇವುಗಳನ್ನು ಮಾಡುವವರ ಸ್ನೇಹಮಾಡುವುದು
ಪಡಿ - ಸಮ
ಪಡಿಗಾಣೆ - ಸಮರನ್ನು ಕಾಣಲಾರೆ
ಪಡಿಪಾಟಲು - ತೊಂದರೆ
ಪಡುವಲ - ಪಶ್ಚಿಮ
ಪಥ - ದಾರಿ
ಪರ್ಣಶನ - ಎಲೆಯನ್ನು ಆಹಾರವಾಗಿ ಸ್ವೀಕರಿಸುವುದು
ಪರಡು - ಹರಡು
ಪರಣನಾಗಿ - ಪ್ರಾಣನಾಗಿ
ಪರಮಸುಹೃತ್ - ಉತ್ತಮ ಹೃದಯವುಳ್ಳವನು
ಪರಮೇಷ್ಠಿ - ಬ್ರಹ್ಮ
ಪರಿಚ್ಛಿನ್ನ - ನಿರಂತರ, ಕತ್ತರಿಸಲಾಗದ
ಪರಿತವಿಸಿ - ವಿಸ್ತರಿಸಿ
ಪರಿಯಂಕ - ಮಂಚ
ಪರುಸ - ಸ್ಪರ್ಶಶಿಲೆ (ಮುಟ್ಟಿದ ಲೋಹವನ್ನು ಚಿನ್ನವನ್ನಾಗಿಸುವ ಶಿಲೆ)
ಪವಣ - ಹವಣ; ಸುಲಭ
ಪವಮಾನ - ವಾಯುದೇವ
ಪಾಲವಲಿಗೆ - ಹಾಲು ಮತ್ತು ಅವಲಕ್ಕಿಗೆ
ಪಾವಕ - ಅಗ್ನಿ (ದೇವತೆ)
ಪಾವಕಜರು - ಅಗ್ನಿಯ ಮಕ್ಕಳು
ಪಾವಳಿ - ನಾಲ್ಕಾಣೆ(ಇಪ್ಪತ್ತೈದು ಪೈಸೆಯ ನಾಣ್ಯ)
ಪಿಂತೆ - ಹಿಂದೆ
ಪೀಯೂಷ - ಅಮೃತ
ಪುಚ್ಛ - ಬಾಲ
ಪೂಶರನು - ಮನ್ಮಥನು
ಪೆರ್ಬುಬ್ಬು - ವಿಶಾಲವಾದ ಕಣ್ಣುಗಳ ಮೇಲಿನ ಹುಬ್ಬು
ಪ್ರಣತಜನರು - ವಂದಿಸಿದ ಜನರು
ಪ್ರಣವ - ಓಂ ಎಂಬ ಮಂತ್ರ
ಪ್ರಣವ ದುಂದುಭಿ - ಓಂಕಾರನಾದ ಧ್ವನಿ
ಪ್ರಮೆ - ಜ್ಞಾನಪೂರ್ಣತೆ
ಪ್ರವಾಳ - ಹವಳ
ಪ್ಲವಂಗನಾಯಕ - ಹನುಮಂತ
ಫಾಲ - ಹಣೆ
ಬಿನುಗುಮಾರ್ಗ- ಕೆಟ್ಟಮಾರ್ಗ
ಬಿಸರುಹನಾಭ - ಪದ್ಮನಾಭ (ವಿಷ್ಣು)
ಬೆಟ್ಟರಿಕೆ - ಬೇಸರ
ಭಣಗುಗಳು - ಸಾಮಾನ್ಯರು
ಭಾಂಡ - ಪಾತ್ರೆ
ಭಾಗಘ್ನ - ಪಾಪನಾಶಕ
ಭೂತಕೃತು - ಸೃಷ್ಟಿಕರ್ತ
ಭೈಷ್ಮಿ - ಪ್ರತಿಮೆಯನ್ನು
ರಚಿಸುವವನು - ಶಿಲ್ಪಿ

ಮಂಡೆ – ತಲೆ
ಮಜ್ಜನ – ಸ್ನಾನ
ಮನ್ಯು – ದುಃಖ
ಮನುಜ ಕೇಸರಿ– ನರಸಿಂಹ
ಮನೋರಥ – ಆಸೆ
ಮರ್ಕಟ – ಕೋತಿ
ಮಲರಿಗೆ – ಪಾಪಿಷ್ಠರಿಗೆ
ಮಹಭೂತಿ – ವಿಶೇಷ ಸನ್ನಿಧಾನ
ಮಹಿಧರನಂದನೆ– ಪಾರ್ವತಿ
ಮಾತುಳವೈರಿ – ಕೃಷ್ಣ (ಮಾವನಾದ ಕಂಸನ ಶತ್ರು)
ಮಾವಾರಿ – ಕೃಷ್ಣ (ಮಾವನಾದ ಕಂಸನ ಶತ್ರು)
ಮಿದ್ದು – ಮೃದು
ಮುಕ್ತಕೇಳಿಗ – ಮೋಕ್ಷದ ಆಟ
ಮುಂತೆ – ಮುಂದೆ
ಮುಪ್ಪುರಾರಿ – ಶಿವ
ಮುಂಬಣೆ – ಹಣೆಯ ಮುಂಭಾಗ
ಮುತ್ತಿನೊಂಟಿ – ಒಂದೇ ಮುತ್ತು
ಮೃಗಮದಾದಿ – ಕಸ್ತೂರಿಯೇ ಮೊದಲಾದ ಸುಗಂಧ ದ್ರವ್ಯ
ಮೋಚಕ – ಪರಿಹಾರ
ಮೋದ – ಸಂತೋಷ
ಯಕ್ಷೇಶನಾಪ್ತ – ಶಿವ
ಯದುಕುಲೇಶ – ವಿಷ್ಣು
ಯೋಮ – ವ್ಯೋಮ – ಆಕಾಶ
ಯೋಷಿ – ಮಹಿಳೆ (ಹೆಂಡತಿ)
ರಕ್ಷಿಯಾದರು – ರಕ್ಷಣೆ ಬೇಕೆನಿಸಿದರೂ

ರಜತವಿಷ್ಟರ – ಬೆಳ್ಳಿಯ ಸಿಂಹಾಸನ
ರತುನತನುವಿನಸುತ –ವಾಯುಪುತ್ರ
ರೇಣು – ಧೂಳು
ರೇಷಿಮೆಗೊಂಡ – ರೇಷಿಮೆಯ ಕುಚ್ಚು
ಲಸತು – ಹೊಳೆಯುವ
ಲಾಗಿಸು – ಹಗುರವಾದಿ ಪರಿಹರಿಸಿಕೊ
ಲಿಂಗಶರೀರ – ಆತ್ಮದ ಮೇಲಿರುವ ಒಂದು ದೇಹ
ಲೋಭಿಗಳರಸ – ವಿಷ್ಣು [ಭಕ್ತರರಾಜ]
ವರದ – ವರವನ್ನು ಕೊಡುವವನು
ವಲ್ಮೀಕ – ಹುತ್ತ
ವಸುಂಧರೆ – ಭೂಮಿ
ವಹಿಲ – ಬೇಗ–ವೇಗ
ವಾಜಿ – ಕುದುರೆ
ವಾತವಂದಿತ – ವಾಯುದೇವರಿಂದ ನಮಸ್ಕಾರವನ್ನು ಪಡೆದವನು
ವಾಮ – ಎಡಭಾಗ
ವಾಯಸ – ಕಾಗೆ
ವಾರಣ – ಕ್ರಮ
ವಾರಿ – ನೀರು
ವಾಲಗ – ಸೇವೆ
ವಾಸರ – ಹಗಲು, ಬೇಸರ
ವಾಸರೋಸರದಲ್ಲಿ – ಪ್ರತಿನಿತ್ಯ
ವ್ರಾತ – ಸಮೂಹ
ವಿಕ್ಷರ – ನಾಶವಿಲ್ಲದವನು
ವಿತ್ತ – ಸಂಪತ್ತು
ವಿಧು – ಚಂದ್ರ
ವಿಭು – ರಾಜ

ವಿಭೂತಿ ಕ್ಷೇತ್ರ - ಭಗವಂತನ ವಿಶೇಷ ಸನ್ನಿಧಾನವುಳ್ಳ ಕ್ಷೇತ್ರ
ವಿಷಭುಂಜ - ವಿಷವನ್ನು ತಿಂದವನು - ಕೃಷ್ಣ
ವೃತ್ರವೈರಿ - ಇಂದ್ರ
ವೃತಿ - ಆವರಣ
ವೆಖ್ವಿಸ - ಆಶ್ಚರ್ಯ
ವೇಧಾ - ಬ್ರಹ್ಮ
ವೈಧಾತ್ರ - ಬ್ರಹ್ಮ
ವೈರಿದಲ್ಲಣ - ಶತ್ರುವಿಗೆ ಭಯವನ್ನುಂಟು ಮಾಡುವವನು
ವ್ಯಜನ - ಬೀಸಣಿಗೆ
ವ್ರಜವೆಲ್ಲ - ಗೋಕುಲದ ಸ್ತ್ರೀಯರೆಲ್ಲ
ಶಂಕರಾಭರಣಶಾಯಿ - ವಿಷ್ಣು
ಶತಪತ್ರನಯನ - ವಿಷ್ಣು
ಶಮೆ - ಶಾಂತಿ, ಮನೋನಿಗ್ರಹ
ಶರ್ವ - ಶಿವ
ಶರಜನ್ಮನಯ್ಯ-ನೊಡಿಯಾ - ವಿಷ್ಣು
ಶಾತ - ಹರಿತ; ಸುಂದರ
ಶೃಂಖಲ - ಬಂಧನ; ಸಂಕೋಲೆ
ಸಂಘದುರಿತ - ಪಾಪಸಮೂಹ
ಸಂತರ್ಪಣೆ - ತೃಪ್ತಿಯಾಗುವಂತೆ ಊಟಮಾಡಿಸುವುದು
ಸಂದೋಹ - ಗುಂಪು
ಸನ್ನಿಭ - ಸಮ
ಸಪ್ತದ್ವೀಪ - ಕುಶ, ಶಾಕ, ಜಂಬು ಪ್ಲಕ್ಷ, ಶಾಲ್ಮಲಿ, ಕ್ರೌಂಚ, ಪುಷ್ಕರದ್ವೀಪ
ಸಪ್ತಾಶ್ವ - ಸೂರ್ಯ
ಸಪ್ತಲೋಕ - ಹದಿನಾಲ್ಕು ಲೋಕ [ಭೂಲೋಕ, ಭುವಲೋಕ, ಸ್ವರ್ಲೋಕ, ಮಹಲೋಕ, ಜನಲೋಕ, ತಪೋಲೋಕ, ಸತ್ಯಲೋಕ ಹಾಗೂ ಅತಲ, ವಿತಲ, ಸುತಲ, ರಸಾತಲ, ತಲಾತಲ, ಮಹಾತಲ, ಪಾತಾಲ]
ಸರಿತ - ನದಿ
ಸರಿಸ - ಸುಲಭ
ಸವ್ಯ - ಪ್ರದಕ್ಷಿಣೆಯ ಕ್ರಮ (ಬಲ)
ಸವ್ಯಸಾಚಿಪ್ರಿಯ- ಅರ್ಜುನನಿಗೆ ಹಿತವಾದವನು - ಕೃಷ್ಣ
ಸರ್ವವಸ್ತು ಮೆಲ್ಲುವವನು - ಅಗ್ನಿ
ಸಾಯಕ - ಬಾಣ
ಸಾವಿರಕ್ಷ - ಇಂದ್ರ (ನೂರುಕಣ್ಣುಳ್ಳವನು)
ಸಾವುಂಶ (ಸಾಂಶ) - ಏಕಕಾಲದಲ್ಲಿ ಅನೇಕ ಸ್ಥಳಗಳಲ್ಲಿರುವವರು
ಸಿಂಧು - ಸಮುದ್ರ
ಸಿಕ್ತೋದಕ - ತೀರ್ಥ
ಸುತ್ರಾಮ - ಇಂದ್ರ
ಸುಪರ್ಣ - ಗರುಡ
ಸುಮನಸ - ದೇವತೆ

ಸುಮನಸತತಿ – ದೇವತಾಸಮೂಹ
ಸೂಕರ – ಹಂದಿ
ಸೃಜಿತರಹಿತ – ಹುಟ್ಟು ಇಲ್ಲದ – ಅನಾದಿ
ಸೋಪಾನ – ಮೆಟ್ಟಿಲು
ಸೋಳಸಾಸಿರ – ಹದಿನಾರು ಸಾವಿರ
ಸ್ಮರ – ಮನ್ಮಥ
ಸ್ಯಂದನ – ರಥ
ಸ್ಥಾಣು – ಶಿವ
ಸ್ವಾಮಿಪುಷ್ಕರಣಿ – ತಿರುಮಲೆಯ ಶ್ರೀನಿವಾಸನ ದೇವಾಲಯದ ಎಡಭಾಗದಲ್ಲಿರುವ ಸರೋವರ

ಹರನಸುತನ
ಪುರಾಣ – ಸ್ಕಂದ ಪುರಾಣ
ಹರಿಣಾಂಕ – ಚಂದ್ರ
ಹರಿಮಣಿ – ನೀಲಿಯ ರತ್ನ
ಹಲ – ನೇಗಿಲು
ಹವ್ಯವಾಹನ್ನ – ಅಗ್ನಿಯನ್ನು
ಹಾಹಾಕ್ಷೇತ್ರ – ಪಂಢರಾಪುರ
ಹೀರತೋರಹಾರ – ದೊಡ್ಡ ವಜ್ರದಹಾರ
ಹುತನೇತ್ರ – ಶಿವ
ಹೃದ್ಭಾನು – ಹೃದಯದಲ್ಲಿ ಸೂರ್ಯನಂತೆ ಪ್ರಕಾಶಿಸುವವನು
ಹೇಮಾಕ್ಷ – ಹಿರಣ್ಯಾಕ್ಷ

# ಅನುಬಂಧ-೨

## ಟಿಪ್ಪಣಿಗಳು

೧

ವಿಜಯದಾಸರು ಭಾರತದ ಮುಖ್ಯನದಿ ಹಾಗೂ ದೇವತಾ ಸನ್ನಿಧಾನ ವಿಶೇಷವಾಗಿರುವ ಸರೋವರಗಳ ಅಭಿಮಾನಿ ದೇವತೆಗಳನ್ನು ಜ್ಞಾನ, ಭಕ್ತಿ, ವೈರಾಗ್ಯಗಳನ್ನು ನೀಡಬೇಕೆಂದು ಈ ಸುಳಾದಿಯಲ್ಲಿ ಪ್ರಾರ್ಥಿಸಿದ್ದಾರೆ.

ದಶೇಂದ್ರಿಯ : ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ನಾಲಗೆ, ನಾಸಿಕ ಇವು ಬುದ್ಧೀಂದ್ರಿಯಗಳು.

ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ, ಇವು ಕರ್ಮೇಂದ್ರಿಯಗಳು. ಹೀಗೆ ಇಂದ್ರಿಯಗಳು ಹತ್ತು.

ದಶದಿಕ್ಕು : ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯ, ಊರ್ಧ್ವ, ಅಧೋ

ಗೋಳಕ : ಭಗವಂತನ ಗುಣ, ರೂಪಕ್ರಿಯೆಗಳನ್ನು ಆತ್ಮನಿಂದ ಹಿಡಿದು ಬ್ರಹ್ಮಾಂಡದವರೆಗಿರುವುದೆಲ್ಲವನ್ನು ಒಂದರೊಳಗೊಂದು ಸಮೀಕರಿಸಿ ಚಿಂತಿಸುವುದೆ ಗೋಳಕವೆನಿಸಿಕೊಳ್ಳುತ್ತದೆ.

೨

'ಅನಂತಶಯನ' ದಕ್ಷಿಣ ಭಾರತದ ಅತ್ಯಂತ ಮುಖ್ಯತೀರ್ಥಕ್ಷೇತ್ರವಾಗಿದೆ. ವಿಷ್ಣುವು ಮಲಗಿರುವ ಭಂಗಿಯಲ್ಲಿ ರುವುದನ್ನು ಇಲ್ಲಿ ಕಾಣಬಹುದು. ದಿವಾಕರನೆಂಬ ಮುನಿಯು ದ್ವಾರಕಾ ಪುರಿಯಲ್ಲಿ ವಿಷ್ಣುವನ್ನು ಕುರಿತು ತಪಸ್ಸು ಮಾಡಿದನು. ಆಗ ವಿಷ್ಣುವು ಬಾಲಕರೂಪದಿಂದ ಮುನಿಗೆ ಕಾಣಿಸಿಕೊಂಡನು. ಆದರೆ ಮುನಿಗೆ ಅವನು ವಿಷ್ಣುವೆಂದು ತಿಳಿಯಲಿಲ್ಲ. ಸಾಮಾನ್ಯ ಬಾಲಕನೆಂದು ಭಾವಿಸಿ ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಮುನಿ ಮುದ್ದಿಸಿದನು. ಬಾಲಕನು ಮುನಿಯ ಕೈಯಿಂದ ಬಿಡಿಸಿಕೊಂಡು ಎದುರಿನಲ್ಲಿದ್ದ ಮೂರು ಯೋಜನ ವಿಸ್ತಾರದ ಒಂದು ಮರದಲ್ಲಿ ಅಡಗಿಕೊಂಡನು. ಇದ್ದಕ್ಕಿದ್ದಂತೆ ಬಾಲಕನು

ಮರದಲ್ಲಿ ಅದೃಶ್ಯವಾದ ನಿಮಿತ್ತ ಅವನು ಭಗವಂತನೇ ಆಗಿದ್ದಿರಬೇಕೆಂದು ಮುನಿಯು ಊಹಿಸಿ ತನ್ನ ಅಜ್ಞಾನಕ್ಕೆ ಮರುಗಿದನು. ಮುನಿಯು ಮತ್ತೆ ದರ್ಶನ ಕೊಡಬೇಕೆಂದು ಅನನ್ಯವಾಗಿ ಪ್ರಾರ್ಥಿಸಿದಾಗ ಮೂರು ಯೋಜನ ವಿಸ್ತಾರದ ಮರವು ಬೇರು ಸಹಿತವಾಗಿ ನೆಲಕ್ಕುರುಳಿತು. ಉರುಳಿದ ಮರವೇ ಅನಂತಶಯನ ಮೂರ್ತಿಯಾಗಿ ಕಂಗೊಳಿಸಿತೆಂದು ಈ ಕ್ಷೇತ್ರದ ಕಥೆಯುಂಟು. ಈ ಕ್ಷೇತ್ರದಲ್ಲಿ ಎಪ್ಪತ್ತೆರಡು ತೀರ್ಥಗಳಿವೆ. ದಿವಾಕರ ಮುನಿಯು ಈ ಅನಂತಶಯನ ಮೂರ್ತಿಯನ್ನು ಒಂದು ಕಲ್ಪದವರೆಗೆ ಪೂಜಿಸಿದನಂತೆ!

೩

ಈ ಸುಳಾದಿಯು ತಾಮ್ರಪರ್ಣಿ ನದಿಯ ತೀರದಲ್ಲಿರುವ ಅನಂತಶಯನ ಕ್ಷೇತ್ರ ಮಹಿಮೆಯನ್ನು–ಕಥೆಯನ್ನು ವರ್ಣಿಸುತ್ತಿದೆ. ಇಲ್ಲಿರುವ ಮೂರ್ತಿ ಶೇಷಶಯನವಾಗಿ ಅನಂತಶಯನನೆನಿಸಿಕೊಂಡಿದ್ದಾರೆ. ಕೇಸಿ ಎಂಬ ರಾಕ್ಷಸನು ಚತುರ್ಮುಖ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಇತರರಿಂದ ಮರಣವಾಗಬಾರದೆಂಬ ವರವನ್ನು ಪಡೆದನು. ಈ ವರಬಲದಿಂದ ಕೇಶಿಯು ಕೊಬ್ಬಿ ದೇವತೆಗಳನ್ನೇ ಪೀಡಿಸಲಾರಂಭಿಸಿದನು. ಹರಿಭಕ್ತರಿಗೆ ತೊಂದರೆಯನ್ನುಂಟು ಮಾಡುತ್ತಿದ್ದನು. ದೇವತೆಗಳು ಇವನ ಕಾಟವನ್ನು ಸೈರಿಸಲಾರದೆ ಬ್ರಹ್ಮನನ್ನು ಮೊರೆ ಇಡಲು ಬ್ರಹ್ಮನು ದೈತ್ಯನನ್ನು ನಿಗ್ರಹಿಸಬೇಕೆಂದು ವಿಷ್ಣುವನ್ನು ಪ್ರಾರ್ಥಿಸಿದನು.

ಬ್ರಹ್ಮನ ರೋಮದಿಂದಲೇ ಜನಿಸಿದ್ದ ಕೇಶಿ ಎಂಬ ದೈತ್ಯನನ್ನ ವಿಷ್ಣುವು ಹಿಡಿದು ಮರ್ದಿಸಿ ಕೇಶಿದೈತ್ಯನು ಮೇಲೇಳದಂತೆ ಅವನ ಮೇಲೆ ವಿಷ್ಣುವು ಮಲಗಿದನು. ಕೇಶಿಯ ಪತ್ನಿಯು ತನ್ನ ಗಂಡನ ಸ್ಥಿತಿಯನ್ನು ನೋಡಿ ಗಂಡನನ್ನು ಬಿಡಿಸಿಕೊಳ್ಳಲೆಂದು ತಾಮ್ರಪರ್ಣಿ ಹಾಗೂ ಗಂಗಾನದಿಯ ದೇವತೆಗಳನ್ನೊಲಿಸಿಕೊಂಡಳು. ಆಗ ತಾಮ್ರಪರ್ಣಿಯು ಗಂಗೆಯ ಸನ್ನಿಧಾನವನ್ನು ಹೊಂದುವುದರ ಜೊತೆಗೆ ದೇವತೆಗಳು ವಿಷ್ಣುವಿನ ದರ್ಶನಕ್ಕೆ ಆಗಮಿಸಿದರು. ವಿಷ್ಣುವು ಅನಂತಶಯನನಾಗಿ ಒಂದು ಕಲ್ಪದವರೆಗೆ ವಿಷ್ಣುವು ಅನಂತಶಯನನಾಗಿ ಅಲ್ಲಿಯೇ ನೆಲೆಸಿದನೆಂದು ಅನಂತ ಶಯನವನ್ನು ಕುರಿತ ಕಥೆಯನ್ನು ವಿಜಯದಾಸರು ಸಂಗ್ರಹಿಸಿದ್ದಾರೆ.

೪

ಈ ಸುಳಾದಿಯೂ ಅನಂತಶಯನ ಮೂರ್ತಿಯನ್ನು ಕುರಿತದ್ದೇ ಆಗಿದೆ. ಅನಂತಶಯನ ಮೂರ್ತಿಯನ್ನು ನೋಡುವ ಭಾಗ್ಯ ಸಾಮಾನ್ಯರಿಗೆ ದೊರಕದೆಂದು ದಾಸರು ಈ ಕ್ಷೇತ್ರದ ಮಹಾತ್ಮೆಯನ್ನು ಬಣ್ಣಿಸಿದ್ದಾರೆ. ಈ ಅನಂತಶಯನ ಮೂರ್ತಿಯ ದರ್ಶನವನ್ನು ಮೂರು ದ್ವಾರದಲ್ಲಿ ಮಾಡಬೇಕು. ಮೊದಲನೆಯ ಬಾಗಿಲಿನಲ್ಲಿ ಪಾದವನ್ನು ಎರಡನೆಯ ಬಾಗಿಲಿನಲ್ಲಿ ಅನಂತಶಯನನ ನಾಭಿಯನ್ನೂ, ಮೂರನೆಯ ದ್ವಾರದಲ್ಲಿ ಅನಂತಶಯನಮೂರ್ತಿಯ ಕಿರೀಟ ಹಾಗೂ ಮುಖದರ್ಶನವನ್ನು ಮಾಡಬಹುದಾಗಿದೆ. ಅನಂತಶಯನನೇ ಪದ್ಮನಾಭ, ವಿಷ್ಣುವಿನ ಹೊಕ್ಕುಳಿನಿಂದ ಕಮಲ ಉದ್ಭವಿಸಿ, ಆ ಕಮಲದಲ್ಲಿ ಬ್ರಹ್ಮನು ಜನಿಸಿರುವನೆಂಬ ಸಂಗತಿಯನ್ನು ದಾಸರು ನೆನೆಪಿಸಿರುವರು. ಅಲ್ಲದೆ ಈ ಮೂರ್ತಿಯ ಅಲಂಕಾರ ವಿಶೇಷವನ್ನು ಈ ಸುಳಾದಿಯಲ್ಲಿ ವರ್ಣಿಸಿದ್ದಾರೆ.

೬. **ಉರಿವಗರಳವನುದುಂಪಿ ನಗುವನೊಬ್ಬ:** ಕ್ಷೀರಸಾಗರ ಮಥನ ಕಾಲದಲ್ಲಿ ಉದಿಸಿದ ವಿಷವನ್ನು ಕುಡಿದು ಜೀರ್ಣಿಸಿಕೊಂಡವರು – ವಾಯುದೇವರು.

೧೬

ಕಂಚಿಯಲ್ಲಿರುವ ವರದರಾಜನನ್ನು ಕುರಿತ ಸ್ತೋತ್ರವಿದು. ತಮಿಳುನಾಡಿನ ಚೆನ್ನೈ ಬಳಿ ಇರುವ ಕಂಚಿ ಪುರಾಣ ಪ್ರಸಿದ್ಧವಾದ ಯಾತ್ರಾಸ್ಥಳ. ಇಲ್ಲಿ ಶಿವಕಂಚಿ; ವಿಷ್ಣುಕಂಚಿ ಎಂದು ಎರಡುಂಟು. ವಿಷ್ಣು ಕಂಚಿಯಲ್ಲಿರುವ ವರದರಾಜನ ಸ್ತೋತ್ರವಿಲ್ಲಿದೆ. ಇಲ್ಲಿ ದಾಸರು ವರದರಾಜನನ್ನು 'ರಾಜ' ಎಂದೇ ಸಂಬೋಧಿಸಿದ್ದಾರೆ. ವರದರಾಜನ ಅಲಂಕಾರವನ್ನು ಇಲ್ಲಿ ದಾಸರು ವರ್ಣಿಸಿದ್ದಾರೆ.

ವೈಕುಂಠದಂತಹ ಪುರವೊಂದನ್ನು ಭೂಲೋಕದಲ್ಲಿ ನಿರ್ಮಾಣಮಾಡಬೇಕೆಂದು ವಿಷ್ಣುವೇ ಈ ಪುರವನ್ನು ರಚಿಸಿ ನೆಲೆಸಿದನೆಂದೂ, ಕಂಚಿಯ ವರದರಾಜನನ್ನು ಬ್ರಹ್ಮನೇ ಪೂಜಿಸಿರುವನೆಂದೂ ದಾಸರು ಹೇಳಿದ್ದಾರೆ.

೧. **ಪುರಂದರದಾಸರ ಮಗನ ಪೊರೆದಾ:** ಪುರಂದರದಾಸರ ನಾಲ್ವರು ಮಕ್ಕಳಲ್ಲಿ 'ವರದಪುರಂದರವಿಠಲ' ಎಂಬ ಅಂಕಿತವನ್ನು ಪಡೆದ ಹರಿದಾಸನೊಬ್ಬನಿದ್ದನು. ಈತನು ಹರಿ ಭಕ್ತನಾಗಿ ಹರಿಕಾರುಣ್ಯವನ್ನು ಪಡೆದ ನಿಮಿತ್ತ ದಾಸರು 'ಪುರಂದರದಾಸರ ಮಗನ ಪೊರೆದ' ಎಂದು ಹೇಳಿದ್ದಾರೆ. ಕಂಚಿಯು ಈಗ ರೇಷ್ಮೆಯ ಜರತಾರಿ ತಯಾರಿಕೆಗೆ ತುಂಬ ಪ್ರಸಿದ್ಧವಾಗಿದೆ ಎಂಬುದನ್ನು ಸ್ಮರಿಸಬಹುದು.

೧೭

ಈ ಸುಳಾದಿಯೂ ಕಂಚಿ ವರದರಾಜನನ್ನು ಸ್ತುತಿಸುತ್ತದೆ. ಸುಳಾದಿಯ ಆರಂಭದಲ್ಲಿ ದಾಸರು ಹರಿಯ ದಶಾವತಾರವನ್ನು ಕೊಂಡಾಡಿದ್ದಾರೆ. ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ರಾಮ, ಕೃಷ್ಣ, ವಾಮನ, ಪರಶುರಾಮ, ಬುದ್ಧ, ಕಲ್ಕಿ ಎಂಬುದೇ ಹರಿಯ ದಶಾವತಾರಗಳು. 'ಜಮದಗ್ನಿ ನಿಜಜಾತ' ಎಂದರೆ ಜಮದಗ್ನಿಯ ಮಗ ಪರಶುರಾಮ ಎಂದರ್ಥ.

ಕಮಲಾಪ್ತ ಕುಲಜಾತ – ಸೂರ್ಯವಂಶ (ರಾಮಾವತಾರ)

ಸುರದ್ರುಮನ ತಂದ ಗಂಭೀರ – ಪಾರಿಜಾತ ವೃಕ್ಷವನ್ನು ಸ್ವರ್ಗಲೋಕದಿಂದ ತಂದವನು – ಕೃಷ್ಣ.

ವ್ರಜರೆಲ್ಲ – ಗೋಪಿಕಾ ಸ್ತ್ರೀಯರು

ಒಮ್ಮೆ ಬ್ರಹ್ಮನು ಇಂದ್ರಾದಿ ದೇವತೆಗಳ ಸಭೆಯನ್ನು ನಡೆಸಿದಾಗ ದೇವತೆಗಳನ್ನು ಸಾಧನಕ್ಕೆ ಉತ್ತಮೋತ್ತಮವಾದ ಭೂಭಾಗವನ್ನು ತಿಳಿಸಬೇಕೆಂದು ಬ್ರಹ್ಮನು ಕೇಳಿದನಂತೆ. ಆಗ ವಸಿಷ್ಠರು ಕಂಚಿಯೇ ಉತ್ತಮೋತ್ತಮ ಸ್ಥಳವೆಂದರು. ಬ್ರಹ್ಮನು ಕಂಚಿಗೆ ಬಂದು ಮಹಾಯಜ್ಞವೊಂದನ್ನು

ನಡೆಸಿದನು. ಆಗ ಯಜ್ಞಕುಂಡದಿಂದ ವಿಷ್ಣುವು ಪ್ರತ್ಯಕ್ಷನಾದನಂತೆ. ಇವನೇ ವರದರಾಜ. ಅಂದಿನಿಂದ ಭಕ್ತರ ಅಭೀಷ್ಟೆಗಳನ್ನು ನೆರವೇರಿಸುತ್ತಿರುವನು.

೧೮

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿರುವ ಒಂದು ಕ್ಷೇತ್ರ ಕದರಿ. ಇದನ್ನು 'ಖಾದ್ರಿ' ಎನ್ನುವುದೂ ಉಂಟು. ಇಲ್ಲಿ ನರಸಿಂಹದೇವರ ವಿಗ್ರಹವಿದೆ. 'ಕದರಿನಾರಸಿಂಹ' ಎಂಬ ಅಂಕಿತದಲ್ಲಿರುವ ಹನುಮದ್ವಿಲಾಸ ತುಂಬ ಪ್ರಸಿದ್ಧವಾದ ಕನ್ನಡ ಕಾವ್ಯವಾಗಿದೆ.

ಕದರಿಯಲ್ಲಿ ಶ್ವೇತಮುನಿ ಎಂಬುವವನು ತಪಸ್ಸು ಮಾಡಿ ವರವನ್ನು ಪಡೆದ ನಿಮಿತ್ತ ಈ ಸ್ಥಳಕ್ಕೆ 'ಶ್ವೇತಾರಣ್ಯ' ಎನ್ನುತ್ತಾರೆ. ಈ ಸ್ಥಳದಲ್ಲಿ ಭೃಗು ಮಹರ್ಷಿಯೂ ತಪವನ್ನಾಚರಿಸಿ ಸಫಲನಾದನೆಂದು ಹೇಳುತ್ತಾರೆ. ಮಾಂಧಾತ ರಾಜನೂ ಕದರಿಯ ನಾರಸಿಂಹನನ್ನು ಪೂಜಿಸಿದನಂತೆ. ಇಲ್ಲಿರುವ ಪುಷ್ಕರಣಿಗೆ ಶ್ವೇತ ಪುಷ್ಕರಣಿ ಎನ್ನುತ್ತಾರೆ. ಭೃಗುತೀರ್ಥ ಎಂಬ ಹೆಸರೂ ಉಂಟು. ಇಲ್ಲಿ ಎಂಟು ಸರೋವರಗಳುಂಟೆಂದು ದಾಸರು ಹೇಳಿದ್ದು ಇದಕ್ಕೆ ಇಂದ್ರತೀರ್ಥ, ಶ್ವೇತತೀರ್ಥ, ನಾರದತೀರ್ಥ, ಋಣ ಮೋಚನತೀರ್ಥ, ರಾಮತೀರ್ಥ, ಶಂಖತೀರ್ಥ, ಚಕ್ರತೀರ್ಥ, ವಸಿಷ್ಠ ತೀರ್ಥ ಎಂಬ ಹೆಸರುಗಳುಂಟು. ಕದರಿಯ ನಾರಸಿಂಹ ದೇವಾಲಯದ ಬಳಿ ಮತ್ತಿ ಮರವುಂಟೆಂದೂ ಇಲ್ಲಿ ಹರಿಯುವ ನದಿಗೆ ಅರ್ಜುನ ನದಿ ಎಂಬ ಹೆಸರುಂಟೆಂದೂ ದಾಸರು ಹೇಳಿದ್ದಾರೆ.

೧೯

ಕನಕಗಿರಿ ಎಂಬುದೂ ಮತ್ತೊಂದು ನಾರಸಿಂಹ ಕ್ಷೇತ್ರವಾಗಿದೆ. ಇದು ಹಂಪೆಯ ಬಳಿ ಉಂಟು. ಇಲ್ಲಿ ನಾರಸಿಂಹ ಮೂರ್ತಿಯುಂಟು. ದಾಸರು ಸ್ಥೂಲವಾಗಿ ನರಸಿಂಹನು ಪ್ರಹ್ಲಾದನಿಗೆ ಪ್ರತ್ಯಕ್ಷವಾದ ಸಂಗತಿಯನ್ನು ಇಲ್ಲಿ ನಿರೂಪಿಸಿದ್ದಾರೆ. ಕನಕಗಿರಿಯಲ್ಲಿರುವ ಶಿವಲಿಂಗವು ನರಸಿಂಹನ ಸನ್ನಿಧಾನ ಉಳ್ಳದ್ದೆಂದೂ 'ಲಿಂಗಾಕಾರವಾಗಿ ಶ್ರೀ ಹರಿಯೆ ಮೆರೆಯುತ್ತಿ'ರುವನೆಂದು ದಾಸರು ಹೇಳಿದ್ದಾರೆ. ಕನಕಗಿರಿ, ಸಿಂಹಾದ್ರಿ ಹಾಗೂ ವಾರಣಾವತಿಯಲ್ಲಿ ನರಸಿಂಹನು ಲಿಂಗಾಕಾರವಾಗಿ ಪೂಜೆಗೊಳ್ಳುತ್ತಿರುವನೆಂದು ದಾಸರು ತಿಳಿಸಿರುತ್ತಾರೆ.

ಕನಕಮುನಿ ಎಂಬುವವನು ಶ್ರೀ ಹರಿಯನ್ನು ಕುರಿತು ಸಫಲ ತಪಸ್ಸನ್ನು ಮಾಡಿದ ಮೇಲೆ ಒಂದು ಕ್ಷಣ ಕಾಲ ಬಂಗಾರದ ಮಳೆ ಇಲ್ಲಿ ಉಂಟಾಯಿತೆಂದು ದಾಸರು ಹೇಳಿದ್ದಾರೆ. ನರಸಿಂಹನು ಲಿಂಗಾಕಾರವಾಗಿ ಮೆರೆಯುತ್ತಾ ಇರುವನು. ಈ ವಿಗ್ರಹದ ಪೂಜೆಯಿಂದ ಐಶ್ವರ್ಯ ಪ್ರಾಪ್ತಿಯಾಗುವುದೆಂದು ದಾಸರು ಹೇಳಿದ್ದಾರೆ. ಇಲ್ಲಿ ನರಸಿಂಹತೀರ್ಥವೆಂಬ ಕೊಳವಿದೆ. ಸ್ಕಾಂದ ಪುರಾಣ ಹಾಗೂ ತುಂಗಾ ಮಹಾತ್ಮೆಯಲ್ಲಿ ಕನಕಗಿರಿಯ ವಿಶೇಷಾಂಶಗಳನ್ನು ಉಲ್ಲೇಖಿಸಲಾಗಿದೆ ಎಂದು ದಾಸರು ತಿಳಿಸಿದ್ದಾರೆ.

ಹರನಸುತನ ಪುರಾಣ – ಸ್ಕಾಂದ ಪುರಾಣ

## ೨೦

ಭಾರತದ ಅತ್ಯಂತ ಪ್ರಸಿದ್ಧವಾದ ಕಾಶಿಯ ವಿಶ್ವೇಶ್ವರನ ಸ್ತುತಿ ರೂಪದ ಸುಳಾದಿ ಇದಾಗಿದೆ. ಕಾಶಿಯು ಉತ್ತರಪ್ರದೇಶ ರಾಜ್ಯದಲ್ಲಿರುವ ಗಂಗಾನದಿಯ ದಡದಲ್ಲಿರುವ ಸ್ಥಳ. ಇದಕ್ಕೆ ವಾರಣಾಸಿ ಎಂಬ ಹೆಸರೂ ಉಂಟು. ವರುಣ ಮತ್ತು ಅಸಿ ಎಂಬ ತೀರ್ಥಗಳಿರುವುದರಿಂದ ಈ ಹೆಸರುಂಟಾಗಿದೆ ಎನ್ನುತ್ತಾರೆ. ಕಾಶಿಯ ವಿಶ್ವೇಶ್ವರನ ದರ್ಶನ, ಗಂಗಾಸ್ನಾನಕ್ಕಿಂತ ಪುಣ್ಯತಮ ಕಾರ್ಯವೇ ಇಲ್ಲವೆಂಬುದು ಭಾವುಕರ ಅಭಿಪ್ರಾಯವಾಗಿದೆ. ಕಾಶಿಯಲ್ಲಿ ಕೆಲವು ದಿನ ವಾಸಮಾಡಿದವರಿಗೆ ಪುನರ್ಜನ್ಮವಿಲ್ಲವೆಂದೂ, ಕಾಶಿಯಲ್ಲಿ ಕೊನೆಯುಸಿರೆಳೆದವರಿಗೆ ಮೋಕ್ಷ ಕಟ್ಟಿಟ್ಟ ಬುತ್ತಿ ಎಂಬ ಪ್ರತೀತಿಯುಂಟು. ಇಲ್ಲಿಯ ಮಣಿಕರ್ಣಿಕಾ ಘಾಟ್ ಅಂತ್ಯ ಸಂಸ್ಕಾರಕ್ಕೆ ಅತ್ಯುತ್ತಮ ಸ್ಥಳವೆನ್ನುತ್ತಾರೆ. ಕಾಶಿಯಲ್ಲಿ ಅನೇಕ ದೇವಾಲಯಗಳುಂಟು. ರಾಮೇಶ್ವರದ ಮರಳನ್ನು ಕಾಶಿಯ ವಿಶ್ವೇಶ್ವರನಿಗೂ, ಕಾಶಿಯ ಗಂಗೆಯನ್ನು ರಾಮೇಶ್ವರನಿಗೂ ಅರ್ಪಿಸುವುದು ಪರಮ ಪುಣ್ಯಕಾರ್ಯವೆಂದು ಪ್ರಸಿದ್ಧವಾಗಿದೆ. ಕಾಶಿಯಲ್ಲಿ ಸಕಲ ದೇವತೆಗಳ ಸನ್ನಿಧಾನವೂ ಉಂಟೆಂದು ದಾಸರು ಹೇಳಿದ್ದಾರೆ. ಇಲ್ಲಿ ಹತ್ತಾರು ಬಾರಿ ಅಶ್ವಮೇಧಯಾಗ ನಡೆದಿದೆ ಎಂದಿದ್ದಾರೆ.

## ೨೧

ಕಾಶಿಯ ವಿಚಾರವನ್ನು ಮಹಾತ್ಮೆಯನ್ನು ವಿವರಿಸುವ ಸುಳಾದಿ ಇದು. ಕಾಶಿಯಲ್ಲಿ ಒಂದು ದಿನವಿದ್ದರೂ ಸಂಚಿತ, ಆಗಾಮಿ, ಪ್ರಾರಬ್ಧ ಕರ್ಮಗಳು ನಾಶವಾಗುವುದೆಂದೂ, ಇದನ್ನು ಪಂಚಗಂಗೆ ಎಂದೂ ಕರೆಯುವರೆಂದೂ ದಾಸರು ಹೇಳಿದ್ದಾರೆ. ಕಾಶಿಯ ಪಂಚಗಂಗೆಯಲ್ಲಿ ಕಾರ್ತಿಕಮಾಸದಲ್ಲಿ ಸ್ನಾನ ಮಾಡಿದ ನಿಮಿತ್ತ ಅಜಾಮಿಳನೆಂಬ ಮಹಾಪಾಪಿಯು ಯಮದೂತರ ಕೈಗೆ ಸಿಗಲಿಲ್ಲವೆಂಬ ಪುರಾಣೋಕ್ತ ಕಥೆಯನ್ನು ದಾಸರು ಉಲ್ಲೇಖಿಸಿದ್ದಾರೆ. ವೇದಶಿರವೆಂಬುವವನ ಮಗಳು ಕಾಶಿಯಾತ್ರೆ ಮಾಡಿ, ಗಂಗಾಸ್ನಾನ ಮಾಡಿ ಪುಣ್ಯವಂತಳಾದಳೆಂದೂ, ಕಾಶಿಯಲ್ಲಿ ವಿಶ್ವೇಶ್ವರ ಹಾಗೂ ಕಾಶಿಯಲ್ಲಿ ಬಿಂದು ಮಾಧವನ ದರ್ಶನ ಮತ್ತು ತ್ರಿವೇಣಿ ಸಂಗಮದಲ್ಲಿ (ಗಂಗಾ, ಯಮುನಾ ಹಾಗೂ ಸರಸ್ವತಿ ನದಿಗಳ ಸಂಗಮ) ಸ್ನಾನಮಾಡುವುದು ಪರಮ ಪುಣ್ಯಕರವೆಂದು ದಾಸರು ಹೇಳಿದ್ದಾರೆ.

| | | |
|---|---|---|
| ಪಂಚತ್ವಗೈಯಲು | – | ಪ್ರಾಣಬಿಡಲು |
| ಧೌತಪಾಪರು | – | ಪುಣ್ಯವಂತರು |
| ಸಂಚಿತಕರ್ಮ | – | ಸಂಪಾದಿಸಿದ ಪಾಪ |
| ಆಗಾಮಿಕರ್ಮ | – | ಹಿಂದಿನ ಪಾಪಕಾರ್ಯಗಳಿಂದ ಮುಂದೆ ಬರಲಿರುವ ದುಃಖ |
| ಪ್ರಾರಬ್ಧಕರ್ಮ | – | ಆತ್ಮನಿಗೆ ಮೊದಲಿನಿಂದಲೂ ಸಹಜವಾಗಿ ಅಂಟಿಕೊಂಡು ಬಂದಿರುವ ಕರ್ಮ |
| ಉರ್ಜಾಮಾಸ | – | ಕಾರ್ತೀಕಮಾಸ |

೨೨

ಕಾಶಿಯ ಬಿಂದು ಮಾಧವ ಹಾಗೂ ವಿಶ್ವೇಶ್ವರನನ್ನು ಕೊಂಡಾಡುವ ಸುಳಾದಿ ಇದು. ಮುಖ್ಯವಾಗಿ ಸ್ತೋತ್ರ ಪ್ರಧಾನ ಸುಳಾದಿ ಇದಾಗಿದೆ. ಕಾಶಿಯಲ್ಲಿ ವಿಶ್ವೇಶ್ವರನ ದರ್ಶನ ಎಷ್ಟು ಮುಖ್ಯವೋ ಅಷ್ಟೇ ಬಿಂದು ಮಾಧವನ ದರ್ಶನವೂ ಮುಖ್ಯವಾಗಿದೆ. ಆದ್ದರಿಂದ ದಾಸರು ಹರಿಹರರಿಬ್ಬರನ್ನು ಇಲ್ಲಿ ಸ್ತುತಿಸಿದ್ದಾರೆ.

೨೩

ತಮಿಳುನಾಡಿನ ಸುಪ್ರಸಿದ್ಧ ಶೈಕ್ಷಣಿಕ ಹಾಗೂ ಧಾರ್ಮಿಕ ಕೇಂದ್ರವೆನಿಸಿದ್ದ ಕುಂಭಕೋಣವನ್ನು ಕುರಿತ ಸುಳಾದಿ ಇದು. ಕುಂಭಕೋಣದಲ್ಲಿ ಅನೇಕ ದೇವಾಲಯಗಳಿದ್ದು ಸಾರಂಗಪಾಣಿಯ ದೇವಾಲಯ ಮುಖ್ಯವಾಗಿದೆ. ಕುಂಭಕೋಣದ ಸಾರಂಗಪಾಣಿಯನ್ನು ಹೇಮಪುರ ನಿಲಯಾ ಎಂದೂ, ಕುಂಭಕೋಣವನ್ನು ಹೇಮಪುರ ಎಂದೂ ದಾಸರು ವಿವರಿಸಿದ್ದಾರೆ. ಸಾರಂಗಪಾಣಿಗೆ ಚಿನ್ನದಾಭರಣಗಳ ವಿಶೇಷಾಲಂಕಾರ ಉಂಟೆಂಬುದನ್ನು ದಾಸರು ತಿಳಿಸಿದ್ದಾರೆ. ಹೇಮಮುನಿ ಎಂಬುವವನಿಗೆ ಈ ಸಾರಂಗಪಾಣಿಯು ಒಲಿದುದನ್ನು ದಾಸರು ಉಲ್ಲೇಖಿಸಿದ್ದಾರೆ.

ಕುಂಭ ಎಂಬ ಮುನಿಯು ಈಶ್ವರನನ್ನು ಇಲಿ ಒಲಿಸಿಕೊಂಡ ನಿಮಿತ್ತ ಈ ಸ್ಥಳಕ್ಕೆ ಕುಂಭಕೋಣವೆಂಬ ಹೆಸರುಂಟಾಯಿತಂತೆ. ಭಗವಾನ್ ಎಂಬ ಮುನಿಯು ತನ್ನ ಗುರುವಿನ ಅಸ್ಥಿಯನ್ನು ಗಂಗಾನದಿಗೆ ಸಂಚಯನ ಮಾಡಲೆಂದು ಹೋಗುತ್ತಾ ಕುಂಭಕೋಣದಲ್ಲಿ ವಸತಿಮಾಡಿದನಂತೆ. ಆಗ ಭಗವಾನನ ಶಿಷ್ಯನಿಗೆ ಹಸಿವೆಯುಂಟಾಗಿ ಗಂಟನ್ನು ಬಿಚ್ಚಿದನು. ಆಗ ಅವನ ಗಂಟಿನಲ್ಲಿದ್ದುದೆಲ್ಲಾ ಹೂವಾಗಿ ಪರಿವರ್ತನೆಗೊಂಡಿದ್ದಿತಂತೆ! ಅಸ್ಥಿ ಎಲ್ಲವೂ ಹೂವಾಗಿ ಪರಿವರ್ತನೆಗೊಂಡಿದ್ದ ನಿಮಿತ್ತ ಕುಂಭಕೋಣವು ಪುಣ್ಯನಿಧಿಯ ಮಣಿಯೆಂದು ಭಗವಾನನು ಕುಂಭಕೋಣವನ್ನು ಪ್ರಶಂಸಿಸಿದನಂತೆ. ಇಲ್ಲಿರುವ ಸಾರಂಗಪಾಣಿಯು ಮಲಗಿರುವ ಭಂಗಿಯಲ್ಲಿರುವನೆಂದು ದಾಸರು ಹೇಳಿದ್ದಾರೆ.

೨೪

ಈ ಸುಳಾದಿಯು ಪಂಚತಿರುಪತಿ ಎಂಬ ಕ್ಷೇತ್ರವನ್ನು ಕುರಿತದ್ದಾಗಿದೆ. ಪಂಚತಿರುಪತಿಯನ್ನು 'ಕುರಂಗ' ಎಂದೂ ಕರೆಯುತ್ತಾರೆ. ಇಲ್ಲಿ ಐದು ಮೂರ್ತಿಗಳಿವೆ.

ಹನುಮಂತನು ಇಲ್ಲಿರುವ ಪರ್ವತದ ಮೇಲೆ ಕುಳಿತು ದಿಕ್ಕು ಶೋಧನೆಗೈದಾಗ ಈ ಪರ್ವತವು ಹತ್ತು ಯೋಜನ ಕುಸಿದು ಹೋಯಿತಂತೆ. ಇದೇ ಸಂದರ್ಭದಲ್ಲಿ ಹುಟ್ಟಿದ್ದು ಹನುಮ ನದಿ, ಕ್ಷೀರನದಿ ಎಂದು ವಿಜಯದಾಸರು ಹೇಳಿದ್ದಾರೆ.

ಕೂರಂಗ ಎಂಬ ರಾಕ್ಷಸನು ಭಕ್ತನೊಬ್ಬನನ್ನು ಸಂಹಾರಮಾಡಲೆಂದು ಪ್ರಯತ್ನಿಸಿದಾಗ ಶ್ರೀನಿವಾಸನು ಭಕ್ತನನ್ನು ಕಾಪಾಡಿದನೆಂದೂ ಇಲ್ಲಿರುವ ಕೋಟಿತೀರ್ಥದಲ್ಲಿ ಕಾಗೆಯೊಂದು

ಸ್ನಾನಮಾಡಿದಾಗ ಬಂಗಾರದ ಕಾಗೆಯಾಯಿತಂತೆ. ಭೃಗುಮುನಿ, ಸಪ್ತಋಷಿಗಳು, ಬಲಿ, ನಾರದ ಮೊದಲಾದವರಿಗೆ ಒಲಿದ ಮೂರ್ತಿ ಎಂದು ದಾಸರು ಸ್ತುತಿಸಿದ್ದಾರೆ. ಪಂಚತಿರುಪತಿಯಲ್ಲಿ ಶ್ರೀನಿವಾಸನು ನಿಂತು ಕುಳಿತ ಮಲಗಿದ ಭಂಗಿಯಲ್ಲಿದೆ.

೨೫

ಈ ಸುಳಾದಿಯೂ ಕುರಂಗ ಕ್ಷೇತ್ರವನ್ನು ಕುರಿತದ್ದಾಗಿದೆ. ಕುರಂಗ ಕ್ಷೇತ್ರದಲ್ಲಿ ಪಂಚಾಮೃತ ಎಂಬ ಸರೋವರ ಉಂಟೆಂಬ ವಿಶೇಷ ಉಲ್ಲೇಖ ಇಲ್ಲಿದೆ. ಕುಂಭ ಸಂಭವನೆನಿಸಿದ ಋಷಿಯು ಇಲ್ಲಿ ತಪಸ್ಸನ್ನು ಮಾಡಿ ಭಗವಂತನನ್ನು ಪ್ರತ್ಯಕ್ಷ ಮಾಡಿಕೊಂಡನೆಂಬುದನ್ನು ದಾಸರು ಉಲ್ಲೇಖಿಸಿದ್ದಾರೆ. ಪಾಂಡ್ಯ ನಾಡಿನ ತಿರುಕ್ಕುರು ಗುಂಡಿಯೇ ಕುರಂಗ ಕ್ಷೇತ್ರ. ಇದು ವಿಷ್ಣು ಕ್ಷೇತ್ರವಾಗಿದೆ.

೨೬

ಮಂಗಳೂರಿನ ಉಡುಪಿಯ ಬಳಿ ಇರುವ ಕೋಟೇಶ್ವರ ಎಂಬ ಯಾತ್ರಾಸ್ಥಳವನ್ನು ಕುರಿತ ಸುಳಾದಿ ಇದಾಗಿದೆ. ಈ ಕ್ಷೇತ್ರದ ಹೆಸರೇ ಹೇಳುವಂತೆ ಇದು ಶಿವನ ಸನ್ನಿಧಾನ ಉಳ್ಳ ಕ್ಷೇತ್ರವಾಗಿದೆ. ಈಶ್ವರನು ಲವಣ ಸಮುದ್ರದಲ್ಲಿ ಹತ್ತು ಮಹಾಕಲ್ಪದವರೆಗೆ ತಪಸ್ಸನ್ನು ಮಾಡಿ ನರಸಿಂಹನ ಪರಮಾನುಗ್ರಹಕ್ಕೆ ಪಾತ್ರನಾದನೆಂದು ದಾಸರು ಹೇಳಿದ್ದಾರೆ. ಈ ಸುಳಾದಿಯಲ್ಲಿ ದಾಸರು ಭಸ್ಮಾಸುರನ ಕಥೆಯನ್ನು ಸಂಗ್ರಹಿಸಿದ್ದಾರೆ. ಭಸ್ಮಾಸುರನು ಶಿವನನ್ನು ಪ್ರತ್ಯಕ್ಷ ಮಾಡಿಕೊಂಡು ತಾನು ಯಾರ ತಲೆಯ ಮೇಲೆ ಕೈ ಇಡುವನೋ ಅವರು ಸುಟ್ಟು ಭಸ್ಮರಾಗಬೇಕೆಂದು ವರವನ್ನು ಕೇಳಿ ಪಡೆದುಕೊಂಡು ಶಿವನ ತಲೆಯ ಮೇಲೆ ಕೈಯಿಟ್ಟು ವರ ಪರೀಕ್ಷೆ ಮಾಡಲು ಯತ್ನಿಸಿದಾಗ ವಿಷ್ಣುವು ಮೋಹಿನಿ ರೂಪವನ್ನು ತಾಳಿ ಭಸ್ಮಾಸುರನನ್ನು ಮೋಹಿಸುವನು. ಭಸ್ಮಾಸುರನು ಮೋಹಿನಿಯಿಂದ ಮೋಹಿತನಾಗಿ ಆಕೆ ಹೇಳಿದಂತೆ ನೃತ್ಯಮಾಡಿ ತನ್ನ ತಲೆಯ ಮೇಲೆ ತಾನೇ ಕೈಯಿಟ್ಟುಕೊಂಡು ಉರಿದು ಭಸ್ಮವಾದನು.

ಕೋಟೇಶ್ವರದಲ್ಲಿರುವ ಈಶ್ವರನನ್ನು ಕೋಟಿ ಸಂಖ್ಯೆಯಲ್ಲಿ ಬ್ರಹ್ಮರ್ಷಿಗಳು ಪೂಜಿಸಿದ ನಿಮಿತ್ತ ಕೋಟೇಶ್ವರ ಎಂಬ ಹೆಸರು ಇದಕ್ಕುಂಟಾಯಿತೆನ್ನುತ್ತಾರೆ.

೨೭

ಉತ್ತರಭಾರತದ ಬಿಹಾರ್ ರಾಜ್ಯದಲ್ಲಿರುವ ಗಯಾ ಭಾರತದ ಅತ್ಯಂತ ಪ್ರಸಿದ್ಧವಾದ ಯಾತ್ರಾಸ್ಥಳವಾಗಿದ್ದು ಈ ಕ್ಷೇತ್ರವನ್ನು ಕುರಿತ ಸುಳಾದಿ ಇದಾಗಿದೆ. ಗಯೆಯಲ್ಲಿ ವಿಷ್ಣುವಿನ ಪಾದಕ್ಕೆ ಪೂಜೆಯನ್ನು ಸಲ್ಲಿಸಲಾಗುತ್ತದೆ. ಈ ಸ್ಥಳ ಫಲ್ಗುಣಿ ನದಿಯ ತೀರದಲ್ಲಿದೆ. ಮುಖ್ಯವಾಗಿ ಶ್ರಾದ್ಧ ಕಾರ್ಯವನ್ನು ಮಾಡಲು ಜನ ಈ ಕ್ಷೇತ್ರಕ್ಕೆ ಹೋಗುತ್ತಾರೆ. ಗಯೆಯಲ್ಲಿ ಎಲ್ಲರೂ ಶ್ರಾದ್ಧಮಾಡಿದ ನಿಮಿತ್ತ ಒಮ್ಮೆ ನರಕಲೋಕ ಖಾಲಿಯಾಯಿತೆಂದು ಪುರಾಣಗಳಲ್ಲಿ ಹೇಳಿರುವುದುಂಟು.

೨೮

ಈ ಸುಳಾದಿಯೂ ಗಯೆಯನ್ನೇ ಕುರಿತದ್ದಾಗಿದೆ. ಗಯೆಯಲ್ಲಿರುವ ಮೂರ್ತಿಯನ್ನು 'ಗದಾಧರ' ಎಂದು ಕರೆಯಲಾಗಿದೆ. ಗಯೆಯಲ್ಲಿ ಪಿಂಡ ಪ್ರದಾನಮಾಡುವ ಅತಿ ಮುಖ್ಯ ಕಾರ್ಯದ ಪ್ರಸ್ತಾಪ ಇಲ್ಲಿದೆ. ಗಯೆಯಲ್ಲಿ ಯಾವ ಯಾವ ಸ್ಥಳಗಳಲ್ಲಿ ಪಿಂಡ ಪ್ರದಾನ ಮಾಡಬೇಕೆಂಬುದನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ. ಪಿಂಡಪ್ರದಾನ ಮಾಡುವುದು ಎಷ್ಟು ಪುಣ್ಯಕರವೆಂಬುದನ್ನು ದಾಸರು ಇಲ್ಲಿ ವಿವರಿಸಿದ್ದಾರೆ.

ಗಯೆಯು ಬಿಹಾರ್ ರಾಜ್ಯದ ಪಾಟ್ನ ಬಳಿ ಇದೆ.

೨೯

ಘಟಿಕಾಚಲ ಒಂದು ಹನುಮಂತನ ಕ್ಷೇತ್ರ. ಮಧುವನ ಮತ್ತೂ ಭುವನರೆಂಬ ದೈತ್ಯರು ತುಂಬ ತೊಂದರೆಯನ್ನು ಕೊಡುತ್ತಿದ್ದರು. ಅವನ ಕಾಟದಿಂದ ತಪ್ಪಿಸಿಕೊಳ್ಳಲು ದೇವತೆಗಳು ಘಟಿಕಾಚಲದಲ್ಲಿ ನರಸಿಂಹನನ್ನ ಕುರಿತು ತಪಸ್ಸು ಮಾಡಿದರು. ಆಗ ನರಸಿಂಹನು ಪ್ರತ್ಯಕ್ಷನಾಗಿ ದೇವತೆಗಳ ಬೇಡಿಕೆಯನ್ನು ಕೇಳಿ ಮುಖ್ಯಪ್ರಾಣನನ್ನು ಕರೆದು ಚಕ್ರವನ್ನು ಕೊಟ್ಟು ದೈತ್ಯನನ್ನು ಸಂಹಾರಮಾಡಲು ಹೇಳಿದನು. ಮುಖ್ಯಪ್ರಾಣನು ದೈತ್ಯನನ್ನು ಸಂಹರಿಸಿದ ಮೇಲೆ ಚಕ್ರವನ್ನು ಹನುಮಂತನೇ ಇಟ್ಟುಕೊಳ್ಳಬೇಕೆಂದು ನರಸಿಂಹ ಹೇಳಿದನಂತೆ. ಇಲ್ಲಿರುವ ಹನುಮಂತನಿಗೆ ನಾಲ್ಕು ಕೈಗಳಿದ್ದು ಹನುಮಂತನು ಶಂಖ, ಚಕ್ರಗಳನ್ನು ಧರಿಸಿರುವನು. ಹನುಮಂತ ಶಂಖ ಚಕ್ರಗಳನ್ನು ಧರಿಸಿರುವ ವಿಗ್ರಹ ಬೇರೆಡೆ ಇಲ್ಲ. ರೋಗಪೀಡೆಯ ನಾಶಕ್ಕೆಂದು ಭಕ್ತರು ಘಟಿಕಾಚಲಕ್ಕೆ ಯಾತ್ರೆ ಹೋಗುತ್ತಾರೆ. ಘಟಿಕಾಚಲವು ತಮಿಳುನಾಡಿನ ಷೋಲಿಂಗಪುರದಿಂದ ಎಂಟೂವರೆ ಮೈಲಿ ದೂರದಲ್ಲಿದೆ. (ಅರಕೋಣಂ ಕಾಟ್ಪಾಡಿಗಳ ಮಧ್ಯೆ)

೩೦

ಸೂರ್ಯನ ಹೆಂಡತಿಯಾದ ಸಂಜ್ಞಾ, ತನ್ನ ಪ್ರತಿರೂಪವೊಂದನ್ನು ಸೃಷ್ಟಿಸಿ, 'ಛಾಯಾ' ಎಂಬ ಹೆಸರಿಟ್ಟು, ತನ್ನ ಮಕ್ಕಳನ್ನು ತುಂಬು ವಾತ್ಸಲ್ಯದಿಂದ ನೋಡಿಕೊಳ್ಳಬೇಕೆಂದು ಛಾಯಾಳಿಗೆ ಹೇಳಿ ಗಂಡನಿಗೆ ತಿಳಿಸದೆ ಸಂಜ್ಞಾ ತವರುಮನೆಗೆ ತೆರಳಿದಳು. ಛಾಯಾ ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳದ ನಿಮಿತ್ತ ಸೂರ್ಯನಿಂದ "ಮನುಷ್ಯ ಲೋಕದಲ್ಲಿ ಹುಟ್ಟು" ಎಂದು ಶಾಪವನ್ನು ಪಡೆದಳು. ಛಾಯಾ ಪಶ್ಚಾತ್ತಾಪ ಪಟ್ಟು ಕ್ಷಮಾ ಯಾಚನೆ ಮಾಡಿದಾಗ "ಶ್ರೀ ಹರಿಯ ಮೋಹಿನಿ ರೂಪವನ್ನು ನೋಡಿದಾಗ ಶಾಪವಿಮೋಚನೆಯಾಗುವುದೆಂದು ತಿಳಿಸಿದನು. ಅನಂತರ ನಾರದರ ಮಾತಿನಂತೆ ಛಾಯಾ ಕ್ಷೇತ್ರಕ್ಕೆ ಬಂದು ತಪಸ್ಸುಮಾಡಿ ಮೋಹಿನಿರೂಪ ದರ್ಶನ ಪಡೆದ ಮೇಲೆ ಶಾಪ ವಿಮೋಚನೆ ಹೊಂದಿದಳು. ಇಲ್ಲಿ ಅನೇಕ ತೀರ್ಥಗಳುಂಟು. ಈ ಸ್ಥಳಕ್ಕೆ ಬ್ರಹ್ಮಗಿರಿ ಎಂಬ ಹೆಸರು ಉಂಟು.

೩೧

ತಮಿಳುನಾಡಿನಲ್ಲಿರುವ ಒಂದು ತೀರ್ಥಕ್ಷೇತ್ರ ತಾಮ್ರಪರ್ಣಿ. ಮೈತ್ರಾವರುಣನೆಂಬ ಮುನಿಯು ವಿಂದ್ಯ ಎಂಬ ಶಿಷ್ಯನನ್ನು ಪಡೆದಿದ್ದನು. ಇವನು ಜಗತ್ತಿಗೆ ಕತ್ತಲೆಯನ್ನುಂಟುಮಾಡಿದನು. ಮೈತ್ರಾವರುಣನು ಆಗ ಮಣಿಕರ್ಣಿಕೆಯಲ್ಲಿ ಸ್ನಾನಮಾಡಲಾಗದೆ ಶ್ರೀಹರಿಯನ್ನು ಪ್ರಾರ್ಥಿಸಲು ಹರಿಯು ಮಣಿಕರ್ಣಿಕೆಯಲ್ಲಿರುವ ಕಮಲವನ್ನು ಹಾಕಿಕೊಂಡು ದಕ್ಷಿಣದ ಕಡೆಗೆ ಹೋಗಬೇಕೆಂದು ತಿಳಿಸಿದನು. ಮೈತ್ರಾವರುಣ ಮಹರ್ಷಿಯು ಅದರಂತೆ ಕಾಶಿಯಿಂದ ಮಲಯಪರ್ವತಕ್ಕೆ ಬಂದು ನಿಂತನು. ಅಲ್ಲಿ ಮಹರ್ಷಿಯ ಕಮಂಡಲುವಿನಿಂದ ನದಿ ಹುಟ್ಟಿ ಹರಿದು 'ತಾಮ್ರಪರ್ಣಿ' ಎಂಬ ಹೆಸರನ್ನು ಪಡೆಯಿತಂತೆ. ಏಳು ಯೋಜನ ವಿಸ್ತೀರ್ಣವಿರುವ ಈ ನದಿಯ ಸ್ನಾನ ಪರಮ ಪುಣ್ಯಕರವೆಂದು ದಾಸರು ಹೇಳಿದ್ದಾರೆ.

ತಾಮ್ರಪರ್ಣಿಯು ನವತಿರುಪತಿಯಲ್ಲಿದೆ.

೩೨

ಈ ಸುಳಾದಿಯೂ ತಾಮ್ರಪರ್ಣಿಯನ್ನು ಕುರಿತದ್ದೇ ಆಗಿದೆ. ತಾಮ್ರಪರ್ಣಿ ನದಿಯ ಸ್ನಾನದ ಮಹತ್ವವನ್ನು ದಾಸರು ಈ ಸುಳಾದಿಯಲ್ಲಿ ವಿವರಿಸಿದ್ದಾರೆ. ಪ್ರೇತ ಸಂಸ್ಕಾರವಿಲ್ಲದ ವಂಶಜರಲ್ಲಿ ಯಾರೇ ತಾಮ್ರಪರ್ಣಿಯಲ್ಲಿ ಸ್ನಾನಮಾಡಿದರೂ ಪ್ರೇತ ಜನ್ಮವನ್ನು ಕಳೆದುಕೊಳ್ಳುವರೆಂದು ದಾಸರು ಹೇಳಿದ್ದಾರೆ.

ಲೋಭಿಗಳರಸ : ಭಗವಂತನನ್ನು ಲೋಭಿಗಳರಸ ಎಂದು ದಾಸರು ಕರೆದಿದ್ದಾರೆ. ಏಕೆಂದು ಏಕಾಂತ ಭಕ್ತರು ತಮ್ಮ ಪುಣ್ಯ ಖರ್ಚಾಗದಂತೆ ನೋಡಿಕೊಳ್ಳುವುದರಿಂದ ಅಂತಹ ಭಕ್ತರನ್ನು ಲೋಭಿಗಳ ಎನ್ನುವುದುಂಟು. ಇಲ್ಲಿ ಭಕ್ತರು ಪುಣ್ಯಲೋಭಿಗಳು ಎಂದು ತಾತ್ಪರ್ಯ. ಲೋಭಿಗಳರಸ ಎಂದರೆ ಇಂತಹ ಭಕ್ತರಿಗೆ ರಾಜನಂತಿರುವವರು – ವಿಷ್ಣು ಎಂದು ತಾತ್ಪರ್ಯ.

೩೩

ತಾಮ್ರಪರ್ಣಿಯ ಮಹಾತ್ಮೆಯನ್ನು ವರ್ಣಿಸುವ ಮೂರನೆಯ ಸುಳಾದಿ ಇದಾಗಿದೆ. ತಾಮ್ರಪರ್ಣಿಯ ಸ್ನಾನ ಮಾಡಿ ನವತಿರುಪತಿಯಲ್ಲಿರುವ ಶ್ರೀನಿವಾಸನ ದರ್ಶನವನ್ನು ಸಂಭ್ರಮದಿಂದ ಮಾಡುವವರಿಗೆ ವಿಜಯವಿಠಲನ ಕೃಪೆ ಸುಲಭವಾಗಿ ದೊರಕುವುದೆಂದು ವಿಜಯದಾಸರು ಈ ಸುಳಾದಿಯಲ್ಲಿ ಹೇಳಿದ್ದಾರೆ.

೩೪

ಎಲ್ಲ ಹರಿದಾಸರೂ ತಿರುಪತಿಯ ವೆಂಕಟೇಶನ ಭಕ್ತರಾಗಿದ್ದು ಪ್ರತಿಯೊಬ್ಬರೂ ಹತ್ತಾರು ಕೀರ್ತನೆ, ಸುಳಾದಿಗಳನ್ನು ತಿರುಪತಿಯ ಶ್ರೀನಿವಾಸನನ್ನು ಕುರಿತು ರಚಿಸಿರುವರು. ಇದಕ್ಕೆ

ವಿಜಯದಾಸರು ಅಪವಾದವಲ್ಲ. ವಿಜಯದಾಸರು ತಿರುಪತಿಯನ್ನು ಕುರಿತು ಮೂವತ್ತೈದು ಸುಳಾದಿಗಳನ್ನು ರಚಿಸಿದ್ದಾರೆ. ತಿರುಪತಿಯು ಆಂಧ್ರಪ್ರದೇಶ ರಾಜ್ಯದ ಚಿತ್ತೂರು ಜಿಲ್ಲೆಯಲ್ಲಿದೆ. ಏಳು ಬೆಟ್ಟಗಳ ಮೇಲೆ ವೆಂಕಟೇಶನ ದೇವಾಲಯವಿದೆ.

ಈ ಸುಳಾದಿಯಲ್ಲಿ ದಾಸರು ತಿರುಪತಿಯ ಶ್ರೀನಿವಾಸನನ್ನು ಕುರಿತು ಭಕ್ತಿಯಿಂದ ಪ್ರಾರ್ಥನೆಯನ್ನು ಸಲ್ಲಿಸಿದ್ದಾರೆ. ತಿರುಪತಿಯ ಶ್ರೀನಿವಾಸನನ್ನು "ತಿರುವೆಂಗಳಪ್ಪ; ತಿಮ್ಮಪ್ಪ; ವೆಂಕಟೇಶ" ಎಂದೆಲ್ಲಾ ಕರೆಯುವರೆಂಬ ಸಂಗತಿಯನ್ನು ಉಲ್ಲೇಖಿಸಿದ್ದಾರೆ.

ಕಲ್ಲುನಾರಿಯ ಮಾಡಿದ : ವಿಷ್ಣುವಿನ ದಶಾವತಾರಗಳಲ್ಲಿ ಒಂದಾದ ರಾಮಾವತಾರದಲಲಿ ಕಲ್ಲಾಗಿದ್ದ ಅಹಲ್ಯೆಯನ್ನು ರಾಮನು ತನ್ನ ಪಾದಸ್ಪರ್ಶದಿಂದ ಉದ್ಧರಿಸಿದ ಕಥೆಯನ್ನು ದಾಸರು ಸೂಚಿಸಿದ್ದಾರೆ.

ಸ್ವಾಮಿತೀರ್ಥವಾಸ: ತಿರುಪತಿಯ ಶ್ರೀನಿವಾಸನ ದೇವಾಲಯದ ಎಡಭಾಗದ ಮುಂದಿನ ಮೂಲೆಯಲ್ಲಿ ಸ್ವಾಮಿಪುಷ್ಕರಣಿ ಎಂಬ ಸರೋವರವಿದೆ. ಆದ್ದರಿಂದ ದಾಸರು ಶ್ರೀನಿವಾಸನನ್ನು ಸ್ವಾಮಿ ತೀರ್ಥನಿವಾಸ ಎಂದು ಕರೆದಿದ್ದಾರೆ.

೩೫

ತಿರುಪತಿಯ ಶ್ರೀನಿವಾಸನನ್ನು ಕುರಿತ ಮತ್ತೊಂದು ಸುಳಾದಿ ಇದು. ಈ ಸುಳಾದಿಯೂ ಪ್ರಾರ್ಥನಾರೂಪದಲ್ಲಿದೆ. ಈ ಲೋಕದ ಬವಣೆಗೆ ಸಿಲುಕಿರುವ ತಮ್ಮ ಸ್ಥಿತಿಯನ್ನು ದಾಸರು ಕಟುಕನ ಕೈಗೆ ಸಿಲುಕಿರುವ ಹಸುವಿನ ಸ್ಥಿತಿಯಂತಾಗಿದೆ ಎಂದು ನುಡಿದಿದ್ದಾರೆ.

ದಾಸರ ಮನೆಯಲ್ಲಿ ವಾಸವಾಗಿದ್ದವ: ವಿಜಯದಾಸರು ಹಿಂದಿನ ಜನ್ಮದಲ್ಲಿ ಪುರಂದರದಾಸರ ಮಗನಾಗಿ ಹುಟ್ಟಿದ್ದರೆಂಬ ಐತಿಹ್ಯವನ್ನು ದಾಸರೇ ಹೇಳಿಕೊಂಡಂತಿರುವುದು ಅಚ್ಚರಿಯ ಸಂಗತಿಯಾಗಿದೆ.

ಖಳರುವಾಮದಲ್ಲಿ ಹುರಿಗೂಡಿ ಬಾಧೆಬಡಿಸುವರು: ಮಾನವನ ದೇಹದ ಎಡಭಾಗದಲ್ಲಿ ದೈತ್ಯರು ಇದ್ದು ಕೆಟ್ಟ ಬುದ್ಧಿ ಪ್ರೇರಣೆ ಮಾಡುವರೆಂದು ತತ್ವಶಾಸ್ತ್ರವು ಹೇಳುತ್ತದೆ.

೩೬

ತಿರುಪತಿಯನ್ನು ಕುರಿತ ಈ ಸುಳಾದಿಯಲ್ಲಿ ಶ್ರೀ ಹರಿಯು ಪ್ರತಿಯೊಂದು ಜೀವದ ಆತ್ಮದೊಳಗೆ ಅಂತರ್ಗತನಾಗಿರುವನೆಂಬ ಸಂಗತಿಯನ್ನು ತಿಳಿಸಿದ್ದಾರೆ. ಈ ಸುಳಾದಿಯಲ್ಲಿ ಶ್ರೀನಿವಾಸನ ಅಲಂಕಾರವನ್ನು ಕನಸಿನಲ್ಲಿ ಕಂಡ ದೃಶ್ಯವನ್ನು ವಿವರಿಸಿದ್ದಾರೆ. ಜೊತೆಗೆ ಶ್ರೀ ಕೃಷ್ಣನ ಲೀಲೆಗಳನ್ನು ವಿವರಿಸಿ ಕೃಷ್ಣನೇ ವೆಂಕಟೇಶನೆಂಬುದನ್ನು ಸಮರ್ಥಿಸಿದ್ದಾರೆ.

## ೩೭

ತಿರುಪತಿಯ ಶ್ರೀನಿವಾಸನಿಗೆ ಮೊದಲಿನಿಂದಲೂ ವಜ್ರ ವೈಢೂರ್ಯಾದಿಗಳಿಂದ ಅಲಂಕರಿಸುವ ಸಂಪ್ರದಾಯ ಉಂಟು. ಈ ಸುಳಾದಿಯಲ್ಲಿ ದಾಸರು ಶ್ರೀನಿವಾಸನಿಗೆ ಅಲಂಕರಿಸಿದ ಕಿರೀಟಾದಿಗಳನ್ನು ವರ್ಣಿಸಿದ್ದಾರೆ. ಈ ಸುಳಾದಿಯಲ್ಲಿಯೂ ದಾಸರು ಕೃಷ್ಣನ ಕೆಲವು ಕಾರ್ಯಗಳನ್ನು ಸ್ಮರಿಸಿ ಸ್ತುತಿಸಿದ್ದಾರೆ.

ಗಿರಿಯ ಬೆರಳೆತ್ತಿ ತರುವ ಕಾಯಿದ: ಕೃಷ್ಣಾವತಾರದಲ್ಲಿ ಒಮ್ಮೆ ಗೋವು ಹಾಗೂ ಗೋಪಾಲಕರೊಡನೆ ಗೋವರ್ಧನ ಬೆಟ್ಟದ ತಪ್ಪಲಿಗೆ ತೆರಳಿರುವಾಗ ಅಸಾಧ್ಯ ಮಳೆ ಬರಲಾರಂಭಿಸಿತು. ಆಗ ಕೃಷ್ಣನು ಗೋವರ್ಧನ ಬೆಟ್ಟವನ್ನು ಒಂದೇ ಬೆರಳಿನಲ್ಲೆತ್ತಿ ಅದರ ಕೆಳಗೆ ಗೋವುಗಳು ಹಾಗೂ ಗೋಪಾಲಕರು ನಿಲ್ಲುವಂತೆ ಮಾಡಿ ಅವರನ್ನೆಲ್ಲ ರಕ್ಷಿಸಿದ.

## ೩೮

ಈ ಸುಳಾದಿಯೂ ತಿರುಪತಿಯ ಶ್ರೀನಿವಾಸನನ್ನು ಕುರಿತ ಸ್ತೋತ್ರವಾಗಿದೆ. ಇಲ್ಲಿಯೂ ದಂತವಕ್ತ್ರಾದಿಗಳನ್ನು ಕೊಂದ ಕೃಷ್ಣನ ಕಥೆಯನ್ನು ದಾಸರು ಸ್ಮರಿಸಿದ್ದಾರೆ.

**ದಂತಿಯ ಪಾಲಿಸಿದ ಪರಮ ಪವಿತ್ರನೊ:** ಗಜೇಂದ್ರನನ್ನು ಮೊಸಳೆಯೊಂದು ಹಿಡಿದು ನುಂಗುತ್ತಿರುವಾಗ ಆ ಆನೆಯು ಕಮಲವೊಂದನ್ನು ಸೊಂಡಿಲಿನಿಂದ ತೆಗೆದು ಶ್ರೀ ಹರಿಯನ್ನು ಸ್ತುತಿಸಿ ಅರ್ಪಿಸಿದಾಗ ವಿಷ್ಣುವು ತನ್ನ ಚಕ್ರದಿಂದ ಮೊಸಳೆಯನ್ನು ಸೀಳಿ ಗಜೇಂದ್ರನನ್ನು ಬದುಕಿಸಿದನಂತೆ!

**ದಂತವಕ್ತಾದಿಯ ಕೊಂದ:** ಶಿಶುಪಾಲ ಮತ್ತು ದಂತವಕ್ತ್ರರು ಸೋದರರಾಗಿದ್ದು ರಾಜಸೂಯಯಾಗದ ಕೊನೆಯಲ್ಲಿ ಪಾಂಡವರು ಕೃಷ್ಣನಿಗೆ ಅಗ್ರಪೂಜೆ ಮಾಡುವುದನ್ನು ವಿರೋಧಿಸಿ ಕೃಷ್ಣನನ್ನು ಬಾಯಿಗೆ ಬಂದಂತೆ ಬೈದು ಹತರಾದರು.

## ೩೯

ತಿರುಪತಿಯ ಶ್ರೀನಿವಾಸನ ಕಾಲಬೆರಳ ಉಗುರನ್ನು ನೋಡಿ ಭಗವಂತನು ನಾನಾ ಸಂದರ್ಭಗಳಲ್ಲಿ ಉಗುರಿನಿಂದ ಮಾಡಿದ ದಿವ್ಯಲೀಲಾ ಸಾಹಸಗಳ ಕಥೆಯನ್ನು ಈ ಸುಳಾದಿಯಲ್ಲಿ ದಾಸರು ಜ್ಞಾಪಿಸಿಕೊಂಡಿದ್ದಾರೆ. ಇದನ್ನು 'ನಖಸ್ತುತಿ ಸುಳಾದಿ' ಎನ್ನಬಹುದು.

**೧. ಜಲಜ ಜಾಂಡಕೆ ಬೆಳೆದು ಬಂದ ಖಪಾರವನ್ನಪ್ಪಳಿಸಿ ಸೀಳಿದ ನಖ:** ವಾಮನಾವತಾರದಲ್ಲಿ ಬಲಿಯನ್ನು ಮೂರು ಪಾದ ಭೂಮಿದಾನ ಬೇಡಿ, ತ್ರಿವಿಕ್ರಮನಾಗಿ ಬೆಳೆದು ಸ್ವರ್ಗಲೋಕವನ್ನು ಅಳೆದುಕೊಳ್ಳುವಾಗ ತ್ರಿವಿಕ್ರಮನ ಪಾದದ ಅಂಗುಟದ ತುದಿಯ ಉಗುರು ಬ್ರಹ್ಮಾಂಡದ ಆವರಣವನ್ನ ಸೀಳಿತು. ಆಗ ದೇವಲೋಕದ ಗಂಗೆಯು ಭೂಲೋಕಕ್ಕೆ ಹರಿಯಿತಂತೆ!

೨. **ಕುರುರಣದಲ್ಲಿ ಸುತ್ರಾಮನಂದನನ ಸ್ಯಂದನ ಎಳೆವ ವಾಜಿಯ ನಡೆಸಿದ ನಖ:** ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನನ ಸಾರಥಿಯಾಗಿ ಕುದುರೆಗಳನ್ನು ನಡೆಸಿದ ಕೃಷ್ಣನ ಸರಳತೆಯನ್ನು ದಾಸರು ನೆನಪಿಸಿಕೊಂಡಿದ್ದಾರೆ.

೪೦

ತಿರುಪತಿಯ ಶ್ರೀನಿವಾಸನ ದರ್ಶನದಿಂದ ಪುಲಕಿತಗೊಂಡ ದಾಸರು ಭಗವಂತನ ಗುಣ ವಿಶೇಷಗಳನ್ನು ಕೊಂಡಾಡಿದ್ದಾರೆ. ಹಿಂದಿನ ಸುಳಾದಿಯಲ್ಲಿ ದಾಸರು ನಖಸ್ತುತಿಯನ್ನು ಮಾಡಿರುವರಾದರೆ ಈ ಸುಳಾದಿಯಲ್ಲಿ ದಾಸರು ಉದರ ಸ್ತುತಿಯನ್ನು ಮಾಡಿದ್ದಾರೆ. ಪ್ರಪಂಚವನ್ನೇ ಹೊಟ್ಟೆಯಲ್ಲಿಟ್ಟುಕೊಳ್ಳುವ ಸಾಮರ್ಥ್ಯ ಭಗವಂತನದೆಂಬುದನ್ನು ದಾಸರು ವಿಶೇಷವಾಗಿ ಉಲ್ಲೇಖಿಸಿದ್ದಾರೆ. ಭಗವಂತನಿಗೆ ಎಂದಿಗೂ ಹಸಿವೆಯೇ ಆಗದೆಂಬ ಗುಣಲಕ್ಷಣವನ್ನು ಹೊಗಳಿದ್ದಾರೆ.

**ಕಲ್ಲಿಬೋನ ಸವಿಯ ಸವಿದು ಡೊಳ್ಳು ಬೆಳೆಸಿಕೊಂಡ ಉದರ:** ಕೃಷ್ಣಾವತಾರದಲ್ಲಿ ಗೋಪಾಲಕರೊಡನೆ ಅರಣ್ಯಕ್ಕೆ ಹೋಗಿ ಅಲ್ಲಿ ಬಿದಿರಿನ ತಟ್ಟೆಯಲ್ಲಿ ಊಟವನ್ನು ಮಾಡುತ್ತಿದ್ದುದನ್ನು ದಾಸರು ಜ್ಞಾಪಿಸಿಕೊಂಡು ಚೆನ್ನಾಗಿ ಉಂಡು ಹೊಟ್ಟೆಯನ್ನು ಬೆಳೆಸಿಕೊಂಡನೆಂದು ಟೀಕಿಸಿದ್ದಾರೆ.

೪೧

ತಿರುಪತಿಯ ಶ್ರೀನಿವಾಸನನ್ನು ಕುರಿತು ಬರೆದಿರುವ ಸ್ತೋತ್ರರೂಪದ ಸುಳಾದಿ ಇದು. ಭಗವಂತನನ್ನು ಭಕ್ತಿಯಿಂದ ಭಜಿಸುವವರು ಮಾಡಿದ ಅಪರಾಧಗಳಿಗೆ ನೆಪಮಾತ್ರಕ್ಕೆ ನೋವಾಗದಂತೆ ಶಿಕ್ಷೆ ಕೊಟ್ಟು ಉದ್ಧರಿಸುವನೆಂದು ದಾಸರು ಇಲ್ಲಿ ಹೇಳಿದ್ದಾರೆ. ಭಕ್ತರ ಬಗ್ಗೆ ಭಗವಂತನಿಗಿರುವ ವಾತ್ಸಲ್ಯವನ್ನು ದಾಸರು ಬಣ್ಣಿಸಿದ್ದಾರೆ. ತಿರುಪತಿಯ ಬೆಟ್ಟವನ್ನು ದಾಸರು ಇಲ್ಲಿ 'ಉರಗಾದ್ರಿ' ಎಂದು ಕರೆದಿದ್ದಾರೆ. ಶೇಷಾಚಲ ಎಂಬ ಹೆಸರೂ ಇದಕ್ಕುಂಟು. ಕೃತಯುಗದಲ್ಲಿ ಈ ಬೆಟ್ಟಕ್ಕೆ ಶೇಷಾಚಲವೆಂದೂ ತ್ರೇತೆಯಲ್ಲಿ ವೃಷಭಾಚಲ ಎಂದು ದ್ವಾಪರದಲ್ಲಿ ಅಂಜನಾಚಲ ಎಂದು ಕಲಿಯುಗದಲ್ಲಿ ವೆಂಕಟಾಚಲ ಎಂದು ಹೆಸರಾಯಿತೆಂದು ಪುರಾಣಗಳು ಹೇಳುತ್ತವೆ.

೪೨

ತಿರುಪತಿಯಲ್ಲಿ ಪ್ರತಿವರ್ಷ ನವರಾತ್ರಿಯಲ್ಲಿ ನಡೆಯುವ ಉತ್ಸವಕ್ಕೆ ಬ್ರಹ್ಮೋತ್ಸವ ಎನ್ನುತ್ತಾರೆ. ಈ ಬ್ರಹ್ಮೋತ್ಸವದ ಆರಂಭದ ದಿನ ಧ್ವಜಾರೋಹಣ ಕಾರ್ಯಕ್ರಮವನ್ನು ಉತ್ಸವ ಮುಗಿದ ಮೇಲೆ ಅವಭೃತ ಸ್ನಾನ ಕಾರ್ಯಕ್ರಮವನ್ನು ನಡೆಸುತ್ತಾರೆ. ನವರಾತ್ರಿಯಲ್ಲಿ ಪ್ರತಿದಿನ ಬೆಳಿಗ್ಗೆ ಹಾಗೂ ರಾತ್ರಿಗಳಲ್ಲಿ ತಿರುಪತಿಯ ಶ್ರೀನಿವಾಸ ದೇವಾಲಯದ ಸುತ್ತಲಿರುವ ನಾಲ್ಕು

ಬೀದಿಗಳಲ್ಲಿಯೂ ಉತ್ಸವವನ್ನು ಬಿಜಮಾಡಿಸುತ್ತಾರೆ. ಇದರಲ್ಲಿ ಗರುಡೋತ್ಸವ ಬಹಳ ಮುಖ್ಯವಾದುದು. ದಾಸರು ಬ್ರಹ್ಮೋತ್ಸವ ಧ್ವಜಾರೋಹಣದ ದಿನದ ಅಲಂಕಾರವನ್ನು ಇಲ್ಲಿ ಬಣ್ಣಿಸಿದಂತಿದೆ.

೪೩

ತಿರುಪತಿಯ ಶ್ರೀನಿವಾಸನನ್ನು ಕುರಿತ ಸ್ತೋತ್ರ ರೂಪದ ಈ ಸುಳಾದಿಯಲ್ಲಿ ಭಗವಂತನ ಅಲಂಕಾರಗಳ ವರ್ಣನೆ ಇದೆ. ಪ್ರಾಸಂಗಿಕವಾಗಿ ಕೈಟಭಾಸುರನನ್ನು ಕೃಷ್ಣ ಕೊಂದುದನ್ನು ವಿಭೀಷಣನಿಗೆ ಶ್ರೀರಾಮನು ಅನುಗ್ರಹಿಸಿದುದನ್ನು ದಾಸರು ಸ್ಮರಿಸಿದ್ದಾರೆ. ನಾರಾಯಣನು ನಿರ್ದೋಷ, ಗುಣಪರಿಪೂರ್ಣ, ಸರ್ವತಂತ್ರ ಸ್ವತಂತ್ರ ಸ್ವರಮಣ (ತನ್ನೊಡನೆ ತಾನೆ ಸುಖಿಸುವನು) ನಾಶರಹಿತ, ಇವನಿಗೆ ಸಮರಾಗಲೀ, ಅಧಿಕಾರಾಗಲೀ ಮತ್ತೊಬ್ಬರಿಲ್ಲವೆಂಬುದನ್ನು ದಾಸರು ಇಲ್ಲಿ ವಿವರಿಸಿದ್ದಾರೆ. ವೆಂಕಟಾಚಲವನ್ನು 'ಆನಂದಗಿರಿ' ಎಂದು ಕರೆಯುವರೆಂಬುದನ್ನು ದಾಸರು ಇಲ್ಲಿ ಸೂಚಿಸಿದ್ದಾರೆ.

೪೪

ತಿರುಪತಿಯ ಬೆಟ್ಟವನ್ನು ಕುರಿತು ಇರುವ ಐತಿಹ್ಯವನ್ನು ಸೂಚಿಸುವುದರೊಡನೆ ತಿರುಪತಿಯ ಬೆಟ್ಟದಲ್ಲಿರುವ ಗಿಡಮರ ಬಳ್ಳಿಗಳೆಲ್ಲ ದೇವತಾಂಶ ಸಂಭೂತವೆಂಬ ಪುರಾಣೋಕ್ತ ವಿಚಾರಗಳ ಪ್ರಸ್ತಾವನೆಯನ್ನು ಹೊಂದಿರುವ ಈ ಸುಳಾದಿಯಲ್ಲಿ ಈ ಬೆಟ್ಟದ ದರ್ಶನ ಪರಮಭಾಗ್ಯವೆಂದು ದಾಸರು ಹೇಳಿದ್ದಾರೆ.

೧. **ಮಾರುತನಿಂದಲಿ ಸೋತು ವಾರುಣೀಶ:** ಯಾರು ಶ್ರೇಷ್ಠರೆಂಬ ವಿಚಾರದಲ್ಲಿ ಒಮ್ಮೆ ಮಾರುತನಿಗೂ ಆದಿಶೇಷನಿಗೂ ವಾಗ್ವಾದ ನಡೆದು ಶೇಷನು ತಾನು ಬಂಧಿಸಿದ ಪರ್ವತವನ್ನು ಶಕ್ತಿ ಇದ್ದರೆ ಹಾರಿಸಬೇಕೆಂದು ಹೇಳಿ ಪರ್ವತಕ್ಕೆ ಸುತ್ತಿಕೊಂಡನು. ಆಗ ಮಾರುತನು ತನ್ನ ಶಕ್ತಿಯಿಂದ ಆ ಪರ್ವತವನ್ನು ಹಾರಿಸಿ ತಿರುಪತಿಯಲ್ಲಿಟ್ಟನೆಂದೂ, ಆದ್ದರಿಂದ ಈ ಪರ್ವತಕ್ಕೆ ಶೇಷಾಚಲವೆಂಬ ಹೆಸರುಂಟಾಯಿತಂದೂ ಪುರಾಣೋಕ್ತ ಕಥೆ ಉಂಟು. ವಾರುಣೀಶ ಎಂದರೆ ಶೇಷ. ಮಾರುತ ಎಂದರೆ ಮುಖ್ಯಪ್ರಾಣ.

೪೫

ತಿರುಪತಿಯ ಬೆಟ್ಟದ ಶಿಖರದರ್ಶನ ಪರಮ ಪುಣ್ಯವೆಂದು ದಾಸರು ಈ ಸುಳಾದಿಯಲ್ಲಿ ಹೇಳುವುದರೊಡನೆ ಇಲ್ಲಿ ಒಟ್ಟು ಅರವತ್ತು ಕೋಟಿ ತೀರ್ಥಗಳಿವೆ ಎಂದೂ, ಇವುಗಳಲ್ಲಿ ಇಪ್ಪತ್ತನಾಲ್ಕು ತೀರ್ಥಗಳು ಬಹಳ ಮುಖ್ಯವೆಂದು ದಾಸರು ಹೇಳಿದ್ದಾರೆ.

೧. **ಒಂದೊಂದು ಯುಗಕೆ ಒಂದೊಂದು ಹೆಸರು ಚಂದವಾಗಿಪ್ಪವು:** ಚತುರ್ಯುಗಗಳಲ್ಲಿ ಕ್ರಮವಾಗಿ ತಿರುಪತಿಯ ಬೆಟ್ಟಕ್ಕೆ ಶೇಷಾಚಲ, ವೃಷಭಾಚಲ, ಅಂಜನಾಚಲ,

ವೆಂಕಟಾಚಲ ಎಂದು ಹೆಸರು ಬಂದಿತೆಂಬುದು ಪುರಾಣೋಕ್ತ ವಿಚಾರವಾಗಿದೆ. ವೃಷಭಾಸುರನು ಭಗವಂತನೊಡನೆ ಯುದ್ಧವನ್ನು ಬಯಸಿ ಸೋತ ಮೇಲೆ ತನ್ನ ಹೆಸರನ್ನು ಆ ಬೆಟ್ಟಕ್ಕೆ ಇಡಬೇಕೆಂದು ಕೇಳಿಕೊಂಡಿದ್ದರಿಂದ ವೃಷಭಾಚಲನೆನಿಸಿತು. ವಾಯುದೇವನು ಈ ಬೆಟ್ಟವನ್ನು ಹಾರಿಸಿಕೊಂಡು ಬಂದು ಶೇಷನನ್ನು ಸೋಲಿಸಿ ಈ ಸ್ಥಳದಲ್ಲಿಟ್ಟ ನಿಮಿತ್ತ ಶೇಷಾಚಲವೆಂಬ ಹೆಸರು ಬಂದಿತು. ಅಂಜನಾದೇವಿಯ ಕಾರಣದಿಂದ ಅಂಜಲಾಚಲವೆನಿಸಿತು. ಕಲಿಯುಗದಲ್ಲಿ ವೆಂಕಟೇಶನು ಇಲ್ಲಿ ನೆಲೆಸಿದ ನಿಮಿತ್ತ ವೆಂಕಟಾಚಲ ಎಂಬ ಹೆಸರುಂಟಾಯಿತು.

೪೬

ತಿರುಪತಿಯ ಶ್ರೀನಿವಾಸನ ನೇತ್ರದರ್ಶನಕ್ಕೆ ವಿಶೇಷ ಮಹತ್ವ ಉಂಟು. ಈ ನೇತ್ರದರ್ಶನವನ್ನು ಕೇವಲ ಗುರುವಾರ ರಾತ್ರಿ ಮಾತ್ರ ಮಾಡಲು ಸಾಧ್ಯ. ಏಕೆಂದರೆ ಆ ದಿನ ರಾತ್ರಿ ಮಾರನೆಯ ದಿನದ ಅಭಿಷೇಕಕ್ಕೆ ದೇವರ ಪ್ರತಿಮೆಯನ್ನು ಅಣಿಗೊಳಿಸುವುದರಿಂದ ಭಗವಂತರ ಕಣ್ಣುಗಳನ್ನು ನೋಡಬಹುದು. ಉಳಿದ ದಿನ ಭಗವನ್ಮೂರ್ತಿಯ ಕಣ್ಣುಗಳ ಮೇಲೆ ನಾಮ ಬಳಿದಿರಲಾಗುತ್ತಿದೆ. ದಾಸರು ಇಲ್ಲಿ ಲೋಚನ ಸ್ತೋತ್ರಗೈದಿರುವರು.

೧. **ಹೇರಳವಾಗಿ ಕಿಡಿತೋರಿದ ಲೋಚನ** : ನರಸಿಂಹಾವತಾರವನ್ನು ಮಾಡಿದಾಗ ಕಣ್ಣುಗಳಿಂದ ಕಿಡಿಯೇ ಹಾರುವಂತೆ ನರಸಿಂಹ ಹಿರಣ್ಯಕಶಿಪುವನ್ನು ನೋಡಿದ ದೃಶ್ಯ.

೨. **ಕರಿಯ ಮೇಲೆ ದಯೆಹರಿಸಿದ ಲೋಚನ**: ಗಜೇಂದ್ರನಿಗೆ ಮೋಕ್ಷ ಕರುಣಿಸಿದ್ದು.

೩. **ಜಲನಿಧಿಯ ಮೇಲೆ ತಿರುಹಿದ ಲೋಚನ**: ರಾಮವತಾರದಲ್ಲಿ ಲಂಕೆಗೆ ಹೋಗಲು ಅಡ್ಡಿಯಾಗಿದ್ದ ಸಮುದ್ರವನ್ನು ಇರಿಸಿರುವ ಹಾಗೆ ಸಮುದ್ರವನ್ನು ರಾಮ ನೋಡಿದ್ದು.

೪. **ದಟ್ಟ ದಾರಿದ್ರ್ಯವನ್ನು ದೃಷ್ಟಿಯಿಂದಲಿ ನೋಡೆ**: ಕುಚೇಲನ ಬಡತನ ನೀಗುವ ಹಾಗೆ ಕರುಣೆಯ ದೃಷ್ಟಿಯನ್ನು ಬೀರಿದ್ದು.

೫. **ಸರ್ವಕಾಲದಲ್ಲಿ ಎವೆ ಹಾಕದಿದ್ದ ಲೋಚನ**: ದೇವತೆಗಳು ಹಾಗೂ ಭಗವಂತನಿಗೆ ರೆಪ್ಪೆ ಇರುವುದಿಲ್ಲವಾದುದರಿಂದ ಅವರು ಎವೆಯಾಡಿಸಲಾರರು.

೪೭

ತಿರುಪತಿಯ ಶ್ರೀನಿವಾಸನ ಭಕ್ತವಾತ್ಸಲ್ಯವನ್ನು ಬಣ್ಣಿಸುವ ಸುಳಾದಿ ಇದಾಗಿದೆ. ಭಗವಂತನು ಸಕಲ ಲೋಕಗಳ ಒಡೆಯನಾದರೂ ಭಕ್ತರಿಗೆ ಬಂಟವಾಗುವನೆಂಬುದನ್ನು ಹೇಳಿದ್ದಾರೆ. ಇದಕ್ಕೆ ಕೃಷ್ಣನು ಅರ್ಜುನನಿಗೆ ಸಾರಥಿಯಾದದ್ದೆ ಸಾಕ್ಷಿಯಾಗಿದೆ. ಭಕ್ತರ ಮೂಲಕವೇ ಭಗವಂತನು ಸಕಲ ಆಹಾರವನ್ನು ಸ್ವೀಕರಿಸುವನೆಂಬ ಹೇಳಿಕೆಯಲ್ಲಿ ಭಕ್ತರಿಗೆ ನೀಡಬೇಕಾದ ಗೌರವವೆಷ್ಟೆಂಬುದನ್ನು ದಾಸರು ಸೂಚಿಸಿದ್ದಾರೆ.

## ೪೮

ತಿರುಪತಿಯ ಶ್ರೀನಿವಾಸನ ಅಲಂಕಾರವನ್ನು ವರ್ಣಿಸುವ ಸುಳಾದಿ ಇದಾಗಿದೆ. ಶ್ರೀನಿವಾಸನಿಗೆ ಉಡಿಸಿದ ಪೀತಾಂಬರದ ಶೋಭೆ, ಚಿನ್ನದ ಆಭರಣಗಳ ವೈಭವದ ವರ್ಣನೆ ಇಲ್ಲಿದೆ. ಕಿರೀಟದಿಂದ ಪಾದದವರೆಗೆ ಮಾಡಿದ ಹಲವು ಅಲಂಕಾರಗಳ ಬಣ್ಣವೆ ಈ ಸುಳಾದಿಯಲ್ಲಿದೆ.

೧. **ಅಂಬರವನ್ನು ಮೀಟಿ ಅಂಬುಜಜಾಂಡವನೊಡೆದು:** ವಾಮನನಾಗಿ ಅವತರಿಸಿದ ವಿಷ್ಣುವು ತ್ರಿವಿಕ್ರಮವಾಗಿ ಬೆಳೆದು ಬ್ರಹ್ಮಾಂಡದ ಖರ್ಪರವನ್ನು ಪಾದದಂಗುಟದಿಂದ ಒಡೆದು ಗಂಗೆಯನ್ನು ಭೂಮಿಗೆ ಹರಿಸಿದಾಗ ಬ್ರಹ್ಮಾದಿ ದೇವತೆಗಳು ಆ ಗಂಗೆಯನ್ನು ಭಕ್ತಿಯಿಂದ ಸ್ವೀಕರಿಸಿದ ಕಥೆಯನ್ನು ಇಲ್ಲಿ ಸೂಚಿಸಲಾಗಿದೆ.

೨. **ಕುಂಭಿಣಿಯಳೆದ:** ಬಲಿ ಚಕ್ರವರ್ತಿಯು ಭೂಮಿಯನ್ನು ಪಾದದ ಮೂಲಕ ಅಳೆದುಕೊಂಡಿದ್ದು.

೩. **ದಶಾವತಾರನೀತ:** ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ರಾಮ, ಪರಶುರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಎಂಬ ಹತ್ತು ಅವತಾರಗಳು.

## ೪೯

ತಿರುಪತಿಯ ಶ್ರೀನಿವಾಸನನ್ನು ಪರಮಭಕ್ತಿಯಿಂದ ಸ್ತುತಿಸಿರುವ ಈ ಸುಳಾದಿಯಲ್ಲಿ ದಾಸರು ಭಗವಂತನನ್ನು ತುಂಬ ಆತ್ಮೀಯತೆಯಿಂದ ಸಂಬೋಧಿಸಿರುವುದನ್ನು ಗುರುತಿಸಬಹುದಾಗಿದೆ. ಜಗತ್ತಿನಲ್ಲಿರುವ ಎಲ್ಲ ಪುಣ್ಯನದಿಗಳ ಸನ್ನಿಧಾನವೂ ಈ ಸ್ವಾಮಿ ಪುಷ್ಕರಣಿಯಲ್ಲಿ ಉಂಟೆಂದು ದಾಸರು ಹೇಳಿದ್ದಾರೆ. ಈ ಸರೋವರದ ಸ್ನಾನದಿಂದ ಸಕಲ ಪಾಪಗಳು ನಾಶವಾಗಿ ಪುಣ್ಯ ಉಂಟಾಗುವುದೆಂದು ದಾಸರು ತಿಳಿಸಿದ್ದಾರೆ.

## ೫೦

ವಿಜಯದಾಸರು ತಿರುಪತಿಯ ಶ್ರೀನಿವಾಸನ ಪಾದ ಮಹಿಮೆಯನ್ನು ವಿವರಿಸಿರುವ ಈ ಸುಳಾದಿಯನ್ನು "ಪಾದಸ್ತೋತ್ರ"ವೆನ್ನಬಹುದು. ಭಗವಂತನ ಪಾದ ಮಾಡಿದ ಚರಿತೆಯ ಉಲ್ಲೇಖ ಇಲ್ಲಿ ಸೂಚನಾತ್ಮಕವಾಗಿ ಮೂಡಿಬಂದಿದೆ.

೧. **ಭುಜಗನ್ನ ಶಿರದಲ್ಲಿ ನೃತ್ಯವಾಡಿದ ಪಾದ:** ಕೃಷ್ಣಾವತಾರದಲ್ಲಿ ಕಾಳಿಂಗ ಸರ್ಪನ ಮೇಲೆ ಯಮುನಾ ನದಿಯಲ್ಲಿ ನೃತ್ಯವಾಡಿದ ಕಥೆ.

೨. **ಭುಜಗಗಿರಿಯ ಮೇಲೆ ಶೋಭಿಸುವ ಪಾದ:** ಶೇಷಾಚಲವೆಂದು ಹೆಸರಾಗಿದ್ದ ತಿರುಪತಿಯ ಬೆಟ್ಟದ ಮೇಲೆ ನಿಂತು ಶೋಭಿಸಿರುವ ಶ್ರೀನಿವಾಸನ ಪಾದ.

೩. **ಕುರುಸಭೆಯನ್ನು ಹೇರುರುಳಿಸಿದ ಪಾದ:** ಕೌರವನ ಸಭೆಗೆ ಕೃಷ್ಣನು ಬಂದಾಗ ದುರ್ಯೋಧನನು ಕೃಷ್ಣನಿಗೆ ಗೌರವ ಕೊಡಬಾರದಿಂದು ಸಿಂಹಾಸನದ ಮೇಲೆ ಕುಳಿತಿದ್ದನು. ಆಗ ಕೃಷ್ಣನು ಪಾದದಿಂದ ನೆಲವನ್ನೆತ್ತಿ ಭೂಕಂಪನವನ್ನುಂಟು ಮಾಡಿ ಕೌರವನು ಸಿಂಹಾಸನದಿಂದ ಕೆಳಗುರುಳುವ ಹಾಗೆ ಮಾಡುತ್ತಾನೆ.

೪. **ದುರುಳ ಶಕಟನ್ನ ಮುರಿಯಲೊದೆದ ಪಾದ:** ದುಷ್ಟನಾದ ಶಕಟಾಸುರನು ಬಂಡಿಯ ರೂಪದಲ್ಲಿ ಬಂದು ಕೃಷ್ಣನನ್ನು ಕೊಲ್ಲಲು ಯತ್ನಿಸಿದಾಗ ಕೃಷ್ಣನು ಬಂಡಿಯನ್ನು ಪಾದದಿಂದೊದ್ದು ಮುರಿದು ಶಕಟಾಸುರನನ್ನು ಕೊಂದನು.

೫. **ರಣದೊಳಗೆ ವೇಗ ಫಲ್ಗುಣನ . . . . . . ಪಾದ:** ಅರ್ಜುನನ ತಲೆಯನ್ನು ತೆಗೆಯಲು ಕರ್ಣನು ಸರ್ಪಾಸ್ತ್ರವನ್ನು ಬಿಟ್ಟಾಗ ಕೃಷ್ಣನು ಭೂಮಿಯನ್ನು ಪಾದದಿಂದೊತ್ತಿ ಅರ್ಜುನನಿದ್ದ ಭೂಭಾಗ ಕುಸಿಯುವಂತೆ ಮಾಡಿ ಸರ್ಪಾಸ್ತ್ರ ವಿಫಲಗೊಳ್ಳುವಂತೆ ಮಾಡಿದನು.

೬. **ಮುನಿಪತ್ನಿ ಶಿಲೆಯಾಗಿ. . . . . . . . . ಪಾದ:** ಗೌತುಮರ ಪತ್ನಿಯಾದ ಅಹಲ್ಯೆಯು ಶಾಪದಿಂದ ಕಲ್ಲಾಗಿದ್ದರು. ರಾಮನು ತನ್ನ ಪಾದ ಸ್ಪರ್ಶದಿಂದ ಆಕೆಯು ಹೆಣ್ಣಾಗುವಂತೆ ಅನುಗ್ರಹಿಸಿದನು.

## ೫೧

ಈ ಸುಳಾದಿಯೂ ಶ್ರೀನಿವಾಸನ ಪಾದ ಮಹಿಮೆಯನ್ನು ಬಣ್ಣಿಸುವ ಸುಳಾದಿಯಾಗಿದೆ.

೧. **ಬಾಲಿಯರ ಕೈಯ ವಾಲಗಗೊಂಬ ಚರಣ:** ಕೃಷ್ಣಾವತಾರದಲ್ಲಿ ಗೋಪಿಕಾ ಸ್ತ್ರೀಯರ ಕೈಗಳಿಂದ ಸೇವೆಯನ್ನು ಪಡೆದ ಕಥೆಯ ಸೂಚನೆ.

೨. **ಗಾಳಿನಂದನನ ಕರದಿ ಮೆರೆವ ಚರಣ:** ಹನುಮಂತನು ಯಾವಾಗಲೂ ಭಗವಂತನಾದ ರಾಮನ ಭಕ್ತ. ತಿರುಪತಿಯಲ್ಲಿ ಹನುಮದ್ವಾಹನೋತ್ಸವ ಉಂಟು. ಅಲ್ಲಿ ಹನುಮಂತನು ತನ್ನ ಹೆಗಲ ಮೇಲೆ ಕುಳಿತ ಶ್ರೀನಿವಾಸನ ಮುಖವನ್ನು ತನ್ನ ಕೈ ಎಂಬ ಕನ್ನಡಿಯ ಮೂಲಕ ನೋಡುತ್ತ ಭಕ್ತಿ ಸಮರ್ಪಣೆ ಮಾಡುವನಂತೆ; ಹನುಮಂತನ ಕೈಗಳ ಮೇಲೆ ಶ್ರೀನಿವಾಸನ ಪಾದವಿರುವಂತೆ ತೋರುತ್ತದೆ.

೩. **ದಾನವ ಬೇಡಿದ ಗಗನ ಒಡೆದ ಚರಣ:** ಬಲಿಚಕ್ರವರ್ತಿಯನ್ನು ದಾನ ಕೇಳಿ ಆಕಾಶವನ್ನು ಒಡೆದ ತ್ರಿವಿಕ್ರಮನ ಕಥೆಯ ಸೂಚನೆ ಇಲ್ಲಿದೆ.

೪. **ಗರುಡನ ಶೃಂಗಾರ ಕರದಿ ಒಪ್ಪುವ ಚರಣ:** ಗರುಡನು ವಿಷ್ಣುವಿನ ವಾಹನ; ಗರುಡನ ಮೇಲೆ ವಿಷ್ಣುವು ಕುಳಿತಾಗ ವಿಷ್ಣುವಿನ ಪಾದಗಳು ಗರುಡನ ಕೈಗಳಲ್ಲಿ ಶೋಭಿತವಾಗಿರುತ್ತದೆ.

## ೫೨

ತಿರುಪತಿಯ ಶ್ರೀನಿವಾಸನನ್ನು ಕುರಿತ ಸ್ತೋತ್ರ ರೂಪದ ಈ ಸುಳಾದಿಯಲ್ಲಿ ದಾಸರು ಭಾವಾತಿಶಯದಿಂದ ಭಗವಂತನನ್ನು ಹಾಡಿ ಹೊಗಳಿ ಸಂತೋಷಪಟ್ಟಿದ್ದಾರೆ. ಶ್ರೀಹರಿಯ ಗುಣವಿಶೇಷಗಳ ವರ್ಣನೆ ಇಲ್ಲಿದೆ. ವೇದ ಶಾಸ್ತ್ರಗಳಲ್ಲಿ ಭಗವಂತನ ಶಕ್ತಿ ಸಾಮರ್ಥ್ಯಗಳನ್ನು ಹೊಗಳಿರುವ ಪರಿಯನ್ನು ಅನುಕರಿಸಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.

## ೫೩

ತಿರುಪತಿಯ ಬೆಟ್ಟಕ್ಕೆ ಆನಂದಾದ್ರಿ, ವೆಂಕಟಾಚಲ ಇತ್ಯಾದಿ ಹೆಸರುಗಳಿರುವಂತೆ ಪುಷ್ಕರಾದ್ರಿ ಎಂಬ ಹೆಸರೂ ಉಂಟು. ಈ ಬೆಟ್ಟವನ್ನೇರಿ ಯಾತ್ರೆ ಮಾಡುವುದು ಪರಮ ಪವಿತ್ರಕರವೆಂದು ಹೇಳುವ ದಾಸರು ಇದನ್ನು "ವೈಕುಂಠ–ಅನಂತಾಸನ–ಶ್ವೇತದ್ವೀಪ" ಎಂದೂ ಕರೆದಿದ್ದಾರೆ. ಈ ಮೇಲೆ ಹೇಳಿದ ಮೂರು ಸ್ಥಳಗಳೂ ವಿಷ್ಣುವಿನ ನಿತ್ಯಾವಾಸ ಸ್ಥಳಗಳಾಗಿವೆ. ಭಾರತದೇಶದ ಅತಿ ಮುಖ್ಯ ಯಾತ್ರಾ ಸ್ಥಳಗಳ ಪಟ್ಟಿಯನ್ನು ದಾಸರು ಕೊಟ್ಟು ಅವುಗಳಿಗೆ ಹೋಗುವುದರಿಂದುಂಟಾಗುವ ಪುಣ್ಯ ಕೇವಲ ತಿರುಪತಿ ಯಾತ್ರೆಯಿಂದ ಲಭ್ಯವೆಂದಿದ್ದಾರೆ.

## ೫೪

ವಿಜಯದಾಸರು ತಿರುಪತಿಯ ಶ್ರೀನಿವಾಸನ ಕಿವಿಗಳಿಗೆ ಮಾಡಿರುವ ಅಲಂಕಾರವನ್ನು ಈ ಸುಳಾದಿಯಲ್ಲಿ ವರ್ಣಿಸಿದ್ದಾರೆ. ಶ್ರೀನಿವಾಸನ ಕಿವಿಗಳನ್ನು ಹಸಿರು ರತ್ನಗಳಿಂದ ತುಂಬಿಸಿರುವ ಕುಂಡಲಗಳಿಂದ ಅಲಂಕರಿಸಿರುವುದನ್ನು ಬಣ್ಣಿಸಿದ ಮೇಲೆ ದೇವತಾ ಸ್ತೋತ್ರಗಳಿಗೆ ಈ ಕಿವಿ ಪದ ತೆರೆದಿರುವುದೆಂದು ಹೇಳಿದ್ದಾರೆ. ಈ ಸುಳಾದಿಯನ್ನು 'ಕರ್ಣ ಸ್ತೋತ್ರ' ಎನ್ನಬಹುದು.

## ೫೫

ಈ ಸುಳಾದಿಯನ್ನು 'ಹಸ್ತ ಸ್ತೋತ್ರ'ವೆನ್ನಬಹುದು. ಶ್ರೀನಿವಾಸನ ಹಸ್ತಾಲಂಕಾರದ ವರ್ಣನೆಯೊಡನೆ ಪುರಾಣಾದಿಗಳಲ್ಲಿ ಭಗವಂತನು ಕೈಯ ಮೂಲಕ ತೋರಿದ ಮಹಿಮಾತಿಶಯಗಳನ್ನು ದಾಸರು ಸೂಚ್ಯವಾಗಿ ಇಲ್ಲಿ ಉಲ್ಲೇಖಿಸಿದ್ದಾರೆ.

೧. **ಬಿಲ್ಲು ಮುರಿದ ಹಸ್ತ:** ಸೀತಾಸ್ವಯಂವರದಲ್ಲಿ ರಾಮನು ಶಿವಧನುಸ್ಸನ್ನು ಮುರಿದದ್ದು.

೨. **ಮಲ್ಲ ಮರ್ದನ ಹಸ್ತ:** ಕಂಸನು ಕಳುಹಿಸಿದ ಚಾಣೂರ, ಮುಷ್ಟಿಕ ಎಂಬ ರಾಕ್ಷಸರನ್ನು ಮಲ್ಲಯುದ್ಧದಲ್ಲಿ ಸೋಲಿಸಿದ್ದು.

೩. **ರಮಣಿಗೋಸುಗ ಪಾರಿಜಾತ ತಂದ ಹಸ್ತ:** ಸತ್ಯಭಾಮೆಯನ್ನು ಸಮಾಧಾನಮಾಡಲು ಶ್ರೀಕೃಷ್ಣನು ಸ್ವರ್ಗದಲ್ಲಿದ್ದ ಪಾರಿಜಾತ ವೃಕ್ಷವನ್ನು ಕಿತ್ತು ತಂದು ಸತ್ಯಭಾಮೆಯ ಅರಮನೆಯಂಗಳದಲ್ಲಿ ನೆಟ್ಟು ಆಕೆಯನ್ನು ಸಮಾಧಾನ ಮಾಡಿದನು.

೪. **ದಾನವನುದರ ಬಗಿದು ಕರುಳ ಕಿತ್ತಿದ ಹಸ್ತ:** ಹಿರಣ್ಯಕಶಿಪುವಿನ ಹೊಟ್ಟೆಯನ್ನು ನರಸಿಂಹ ಉಗುರುಗಳಿಂದ ಬಗಿದು ಕರುಳನ್ನು ಕಿತ್ತಿ ಹಾಕಿದ ಕಥೆ.

೫. **ವಾನರೇಶಗೆ ಬೊಮ್ಮ ಪದವಿ ಕಟ್ಟಿದ ಹಸ್ತ:** ಹನುಮಂತನ ಸೇವೆಯನ್ನು ಪರಿಗಣಿಸಿ ಅವನಿಗೆ ಮುಂದಿನ ಕಲ್ಪದಲ್ಲಿ ಬ್ರಹ್ಮ ಪದವಿಯನ್ನು ಕೊಡುವುದಾಗಿ ರಾಮನು ಹೇಳಿದ ವಿಚಾರ ಇಲ್ಲಿದೆ.

೬. **ವಿದುರನ ಮನೆಯಲ್ಲಿ ಕ್ಷುಧಿಗೆ ಪಾಲ್ಗುಡಿದ ಹಸ್ತ:** ಸಂಧಾನಕ್ಕೆಂದು ಹಸ್ತಿನಾವತಿಗೆ ಬಂದಾಗ ಕೃಷ್ಣನು ಭಕ್ತನಾದ ವಿದುರನ ಮನೆಗೆ ಹೋಗುವನು. ವಿದುರನು ಕೃಷ್ಣನಾಗಮನದ ಸುದ್ದಿಯಿಂದ ಹರ್ಷ ಪುಳಕಿತವಾಗಿ ಕೇವಲ ಒಂದೇ ಒಂದು ಲೋಟ ಹಾಲನ್ನು ಕೊಡುವನು. ಆ ಹಾಲನ್ನು ಕುಡಿದು, ಚೆಲ್ಲಿ ಕ್ಷೀರ ನದಿಯನ್ನೇ ಕೃಷ್ಣ ಸೃಷ್ಟಿಸುತ್ತಾನೆ.

೫೬

ತಿರುಪತಿಯನ್ನು ಕುರಿತು ಅನೇಕ ಸುಳಾದಿಗಳನ್ನು ದಾಸರು ರಚಿಸಿದ್ದು, ಈ ಸುಳಾದಿಯಲ್ಲಿ ತಿರುಪತಿ ಬೆಟ್ಟವನ್ನೇರಿ ದಾರಿಯಲ್ಲಿ ಯಾವ ಯಾವ ಮೂರ್ತಿಗಳನ್ನು ಕ್ರಮವಾಗಿ ದರ್ಶನ ಮಾಡಬೇಕೆಂಬ ಸಂಪ್ರದಾಯದ ವಿಚಾರವನ್ನು ತಿಳಿಸಿದ್ದಾರೆ. ಅಲ್ಲದೆ ಈ ಬೆಟ್ಟದಲ್ಲಿರುವ ಗಿಡ, ಮರ, ಬಳ್ಳಿ, ಪಕ್ಷಿ, ಮೃಗಗಳೆಲ್ಲ ದೇವತಾಂಶ ಸಂಭೂತವಾಗಿದೆ ಎಂಬುದನ್ನು ಹೇಳಿದ್ದಾರೆ.

ತಿರುಪತಿ ಯಾತ್ರೆಗೆ ಹೋದವರು ಮೊದಲು ಬೆಟ್ಟದ ಕೆಳಗಿರುವ ಕಪಿಲ ತೀರ್ಥದಲ್ಲಿ ಸ್ನಾನ ಮಾಡಿ ಕಪಿಲೇಶ್ವರನ ದರ್ಶನ ಮಾಡಿ ಅನಂತರ ಸುದರ್ಶನ ತೀರ್ಥದಲ್ಲಿ ಸ್ನಾನ ಮಾಡಿ ನರಸಿಂಹನ ದರ್ಶನ ಮಾಡಿ ಅನಂತರ ಬೆಟ್ಟವೇರಿ ದಾರಿಯಲ್ಲಿ ಆಂಜನೇಯನ ಮೂರ್ತಿಯನ್ನು ದರ್ಶಿಸಿ ಸ್ವಾಮಿಪುಷ್ಕರಣಿ ಸ್ನಾನ ಗೈದು ಭೂವರಾಹ ಮೂರ್ತಿಯನ್ನು ನೋಡಿ ಅನಂತರ ಶ್ರೀನಿವಾಸನ ದರ್ಶನಕ್ಕೆ ಹೋಗಬೇಕೆಂದೂ, ಅಲ್ಲಿ ದೇವರಿಗೆ ಹನ್ನೆರಡು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕೆಂದು ದಾಸರು ಹೇಳಿದ್ದಾರೆ.

೫೭

ತಿರುಪತಿಯ ಶ್ರೀನಿವಾಸನು ಸ್ವಯಂ ವ್ಯಕ್ತ ಮೂರ್ತಿಯಾಗಿದ್ದಾನೆ. ಇವನು ಶ್ರೀಹರಿಯೇ ಆಗಿದ್ದಾನೆಂಬುದನ್ನು ಮನವರಿಕೆ ಮಾಡಿಕೊಡಲು ದಾಸರು ದಶಾವತಾರಗಳನ್ನು ಸುಳಾದಿಯ ಆರಂಭದಲ್ಲಿ ತಿಳಿಸಿ ಭಗವಂತನ ಮೂಲರೂಪಕ್ಕೂ ಅವತಾರಗಳಿಗೂ ಶಕ್ತಿ ಸಾಮರ್ಥ್ಯಗಳಲ್ಲಿ ವ್ಯತ್ಯಾಸವಿಲ್ಲವೆಂಬುದನ್ನು ತಿಳಿಸಿದ್ದಾರೆ. ನಂಬಿದ ದಾಸರನ್ನು–ಭಕ್ತರನ್ನು ಭಗವಂತನು ಎಂದಿಗೂ ಕೈಬಿಡುವುದಿಲ್ಲವೆಂಬ ಸಂಗತಿಯನ್ನು ದಾಸರು ಪುನರುಚ್ಚರಿಸಿದ್ದಾರೆ.

೫೮

ತಿರುಪತಿಯ ಶ್ರೀನಿವಾಸನು ಸಕಲರಿಂದಲೂ ಅರ್ಚಿತನೆಂಬುದನ್ನು ದಾಸರು ಹೇಳಿ, ಭಗವಂತನ ಪಾದ ಮಹಿಮೆಗಳನ್ನು ಇಲ್ಲಿ ವಿವರಿಸಿದ್ದಾರೆ. ಭಗವಂತನ ಪಾದ ದರ್ಶನದಿಂದಲೇ

ಜನ್ಮ ಸಾರ್ಥಕವೆಂಬುದನ್ನು ತಿಳಿಸುವ ದಾಸರು ವಿಶ್ವವೇ ಭಗವಂತನ ಶರೀರವೆಂದಿದ್ದಾರೆ. ವಿಶ್ವಕುಟುಂಬ, ವಿಶ್ವಾಧಾರಕನೇ ಈ ಶ್ರೀನಿವಾಸನೆಂದು ವೇದಗಳಲ್ಲಿ ಹೇಳಿರುವ ಮಾತುಗಳನ್ನು ಕನ್ನಡದಲ್ಲಿ ತಿಳಿಸಿದ್ದಾರೆ.

೧. **ಮೋಚಕವಾಗುವುದು ಲಿಂಗಶರೀರವು:** ಆತ್ಮದ ಮೇಲೆ ಲಿಂಗಶರೀರ, ಸೂಕ್ಷ್ಮ ಶರೀರ, ಅನಿರುದ್ಧ ಶರೀರ ಎಂಬುದುಂಟೆಂದು ಶಾಸ್ತ್ರ ಹೇಳುತ್ತದೆ. ಲಿಂಗಶರೀರವೆಂಬುದು ನಾಶವಾದ ಮೇಲೆಯೇ ಮೋಕ್ಷ ಲೋಕವನ್ನು ಆತ್ಮ ಪ್ರವೇಶಿಸುವುದೆಂದು ಶಾಸ್ತ್ರದ ಅಭಿಪ್ರಾಯವಾಗಿದೆ. ಈ ಅಧಿಕಾರವನ್ನು ಭಗವಂತನು ಹೊಂದಿದ್ದಾನೆ.

೫೯

ತಿರುಪತಿಯ ಶ್ರೀನಿವಾಸನನ್ನು ಕುರಿತು ದಾಸರು ಹಾಡಿರುವ ಈ ಸುಳಾದಿಯಲ್ಲಿ ದಾಸರ ಭಕ್ತಿಯನ್ನು ಗುರುತಿಸಬಹುದಾಗಿದೆ. ಸಕಲ ಕರ್ಮಗಳನ್ನು ಶ್ರೀನಿವಾಸನಿಗೇ ಅರ್ಪಿಸಬೇಕೆಂದು ದಾಸರು ಇಲ್ಲಿ ಹೇಳಿದ್ದಾರೆ.

೬೦

ತಿರುಪತಿಯ ಶ್ರೀನಿವಾಸನ ನಾಮ ಮಹಾತ್ಮೆಯನ್ನು ವಿಜಯದಾಸರು ವರ್ಣಿಸಿರುವುದರೊಡನೆ ಭೂವೈಕುಂಠವೆಂದು ತಿರುಪತಿ ಖ್ಯಾತಿಯಾಗಿದೆ ಎಂದು ಹೇಳಿದ್ದಾರೆ. ಈ ದೇವಾಲಯದ ದ್ವಾರ, ಗರುಡಗಂಭ, ಪ್ರಾಕಾರ, ಕಳಶಗಳು ಹೇಗೆ ಅದರ ವೈಭವವನ್ನು ಪ್ರತಿಬಿಂಬಿಸುತ್ತಿದೆ ಎಂಬುದನ್ನು ದಾಸರು ವಿವರಿಸಿದ್ದಾರೆ. ಮತ್ತೆ ಹುಟ್ಟದಿರುವ ಸ್ಥಿತಿಯನ್ನು ಪಡೆಯಬೇಕಾದರೆ ಶ್ರೀನಿವಾಸನ ಪಾದದಲ್ಲಿ ಭಕ್ತಿಯನ್ನು ಬೆಳೆಸಿಕೊಳ್ಳಬೇಕೆಂದು ದಾಸರು ಹೇಳಿದ್ದಾರೆ.

೬೧

ತಿರುಪತಿಯ ಶ್ರೀನಿವಾಸನು ಮೂವತ್ತುಮೂರು ಕೋಟಿ ದೇವತೆಗಳಿಗೊಡೆಯನಾದರೂ ತನ್ನ ದಶಾವತಾರಗಳಲ್ಲಿ ಅದೆಷ್ಟು ಸರಳತೆಯಿಂದ ಎಲ್ಲರೊಡನೆ ಬೆರೆತು ಬಾಳಿದನೆಂಬುದನ್ನು ವಿಜಯದಾಸರು ಇಲ್ಲಿ ವಿವರಿಸಿದ್ದಾರೆ. ಆದಿಶೇಷವನ್ನು ಅಣ್ಣನನ್ನಾಗಿ (ಬಲರಾಮ) ಕೃಷ್ಣ ಮಾಡಿಕೊಂಡಿದ್ದರಲ್ಲಿಯೂ ದಾಸರು ಶ್ರೀಹರಿಯ ಸರಳತೆಯನ್ನು ಗುರುತಿಸಿದ್ದಾರೆ. ಶ್ರೀಹರಿಯ ಅವತಾರಗಳಲ್ಲಿ ಕೃಷ್ಣಾವತಾರಿಯಾದಾಗ ಸರಳತೆ ಮುಗಿಲು ಮುಟ್ಟಿತೆಂಬುದನ್ನು ದಾಸರು ಗುರುತಿಸಿದ್ದಾರೆ.

೬೨

ಇದೊಂದು ಸ್ತೋತ್ರ ಪ್ರಧಾನ ಸುಳಾದಿಯಾಗಿದೆ. ಭಗವಂತನ ಗುಣವಿಶೇಷಗಳನ್ನು ಗುರುತಿಸುವಾಗ ಅವನು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವನೆಂಬ ಸಂಗತಿಯನ್ನು ದಾಸರು

ವಿಶೇಷವಾಗಿ ಸೂಚಿಸಿದ್ದಾರೆ. ಈ ಗುಣವನ್ನು ಆಡಳಿತಗಾರರು ರೂಢಿಸಿಕೊಂಡಾಗಲೇ ಸಮಾಜ ಶಿಸ್ತಿನ ಚೌಕಟ್ಟಿನಲ್ಲಿರಲು ಸಾಧ್ಯವೆಂಬುದನ್ನು ನಾವು ಮನಗಾಣಬೇಕಾಗಿದೆ.

ಶ್ರೀನಿವಾಸನನ್ನು 'ಲಂಕೇಶ ಪೋಷ' ಎಂದು ಇಲ್ಲಿ ಕರೆದಿದ್ದಾರೆ. ಇದು ವಿಭೀಷಣನಿಗೆ ಅನ್ವಯವಾಗುತ್ತದೆ.

## ೬೩

ತಿರುಪತಿಯ ಶ್ರೀನಿವಾಸನ್ನು ಕುರಿತ ದೀರ್ಘ ರಚನೆ ಇದು. ಶ್ರೀನಿವಾಸನ ಸಂದರ್ಶನವನ್ನು ಯಾವ ಬಗೆಯಾಗಿ ಮಾಡಬೇಕೆಂಬುದನ್ನು ದಾಸರು ಇಲ್ಲಿ ವರ್ಣಿಸಿದ್ದಾರೆ. ತಿರುಪತಿ ಯಾತ್ರೆ ಮಾಡಲಾಗದಿದ್ದವರು ತಿರುಪತಿಯ ಶ್ರೀನಿವಾಸನ ಸ್ಮರಣೆಯನ್ನು ಇದ್ದಲ್ಲಿಯೇ ಮಾಡಿದರೂ ಭಗವಂತನ ಕೃಪೆ ಉಂಟಾಗುವುದೆಂದು ದಾಸರು ಹೇಳಿದ್ದಾರೆ. ಭಗವಂತನ ದರ್ಶನ ಮಾಡಿ ಸರ್ವಸಮರ್ಪಣೆ ಮಾಡಿ ಶರಣಾಗತರಾಗಿ ಭಗವಂತನನ್ನು ಪೂಜಿಸಬೇಕೆಂದು ದಾಸರು ಹೇಳಿದ್ದಾರೆ.

೧. **ಚಂದ್ರನ ಗುರುತಲ್ಪ:** ಚಂದ್ರನು ಬೃಹಸ್ಪತ್ಯಾಚಾರರಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವಾಗ ಬೃಹಸ್ಪತ್ಯಾಚಾರ್ಯರ ಹೆಂಡತಿಯಾದ ತಾರೆಯನ್ನು ಚಂದ್ರ ಮೋಹಿಸಿ ಗುರುಗಳಿಲ್ಲದ ಸಮಯದಲ್ಲಿ ತಾರೆಯನ್ನು ಅಪಹರಿಸಿದನು.

೨. **ಬಲಿಯ ಸ್ವರ್ಣಸ್ತೇಯ:** ಬಲಿಚಕ್ರವರ್ತಿಯು ಒಮ್ಮೆ ಇಂದ್ರನ ಕಿರೀಟವನ್ನೇ ಅಪಹರಿಸುತ್ತಾನೆ.

೩. **ದಿವಿಜಪತಿಯ ಪರಸತಿಯ ಗಮನ ದೋಷ:** ಇಂದ್ರನು ಅಹಲ್ಯೆಯನ್ನು ಮೋಹಿಸಿ ಸಂಪಾದಿಸಿದ ಪಾಪ.

## ೬೪

ತಿರುಪತಿಯ ಶ್ರೀನಿವಾಸನನ್ನು ಕುರಿತ ಈ ಸುಳಾದಿಗೆ ತಾಳಗಳ ನಿರ್ದೇಶನವಿಲ್ಲ. ತಿರುಪತಿಯ ಬೆಟ್ಟದಲ್ಲಿರುವ ಪ್ರತಿಯೊಂದು ಶಿಲೆಯೂ ಸಾಲಿಗ್ರಾಮವೆಂದೂ, ಇಲ್ಲಿ ಮಾಡುವ ಸ್ನಾನ, ಭಗವಂತನ ಮೂರ್ತಿಯ ದರ್ಶನ, ಮಾಡುವ ದಾನ, ಭಜನೆಗಳಿಗೆ ವಿಶೇಷ ಪುಣ್ಯ ಉಂಟೆಂದು ವಿಜಯದಾಸರು ಹೇಳಿದ್ದಾರೆ. ಆದಿಶೇಷನ ಚಿನ್ನದ ವಾಹನದಲ್ಲಿ ಕಾಣುವ ಏಳು ಹೆಡೆಗಳ ವೈಭವವನ್ನು ದಾಸರು ಬಣ್ಣಿಸಿದ್ದಾರೆ.

## ೬೫

ತಿರುಪತಿಯ ಶ್ರೀನಿವಾಸನ ಮುಖವನ್ನು ನೋಡಿ ಭಕ್ತಿಭಾವದಿಂದ ದಾಸರು ಭಗವಂತನ ಮುಖ ಮಾಡಿದ ಕಾರ್ಯಸಾಧನೆಗಳನ್ನು ಭಾರತ, ಭಾಗವತಾದಿ ಪುರಾಣಗಳಲ್ಲಿ ವರ್ಣಿಸಿರುವುದನ್ನು ಜ್ಞಾಪಿಸಿಕೊಂಡು ಸ್ತುತಿಸಿದ್ದಾರೆ. ಆದ್ದರಿಂದ ಇದನ್ನು 'ವದನ ಸ್ತೋತ್ರ' ಎನ್ನಬಹುದು.

೧. **ಬಸುರೊಳಗೆ ವನಜಜಾಂಡ ತೋರಿದ ವದನ:** ಯಶೋದಾ ದೇವಿಗೆ ಕೃಷ್ಣನು ಬಾಯಿತೆರೆದು ಬ್ರಹ್ಮಾಂಡವನ್ನೇ ತೋರಿದ ಪ್ರಸಂಗವನ್ನು ದಾಸರು ಇಲ್ಲಿ ಸೂಚಿಸಿದ್ದಾರೆ.

೨. **ಜನನಿಗೆ ತತ್ವವ ಪೇಳಿದ ವದನ:** ಕೃಷ್ಣನು ದೇವಕಿ ದೇವಿಗೆ ತನ್ನ ಸ್ವರೂಪನ್ನು ತೋರಿಸಿ ತತ್ವೋಪದೇಶ ಮಾಡಿದ್ದಾನೆ.

೩. **ಅಂಬರೀಷ ಪಾಲ:** ಅಂಬರೀಷ ಮಹಾರಾಜನ ಮಗಳನ್ನು ಮದುವೆಯಾಗಲು ನಾರದ ಪರ್ವತರಿಬ್ಬರೂ ವಿಷ್ಣುವಿನ ಸಹಾಯ ಕೋರಿದಾಗ ವಿಷ್ಣು ಇಬ್ಬರಿಗೂ ಅಭಯ ಪ್ರಧಾನ ಮಾಡಿ, ಭಕ್ತನಾದ ಅಂಬರೀಷನಿಗೆ ಈ ಮಹರ್ಷಿಗಳ ಶಾಪ ತಟ್ಟದಂತೆ ತಾನೇ ರಾಜಪುತ್ರಿಯನ್ನು ಪರಿಗ್ರಹಿಸಿ ಅಂಬರೀಷನ ಮನೋಭೀಷ್ಟೆಯನ್ನು ನೆರವೇರಿಸುವನು.

೬೬

ತಿರುಪತಿಯ ವೆಂಕಟೇಶನ ಬಿಂಬರೂಪ ದರ್ಶನವಾಗಲಿಲ್ಲವೆಂಬ ದುಃಖದಿಂದ ದಾಸರು ಭಗವಂತನನ್ನು ಅನನ್ಯವಾಗಿ ಪ್ರಾರ್ಥಿಸಿರುವುದರೊಡನೆ ಅನೇಕ ಭಕ್ತರನ್ನುದ್ಧರಿಸಿದ ಪ್ರಕರಣಗಳನ್ನು ಉದಾಹರಿಸಿ ನಮ್ಮನ್ನು ಉದ್ಧರಿಸಬೇಕೆಂದು ವಿಜಯದಾಸರು ಈ ಸುಳಾದಿಯಲ್ಲಿ ಪ್ರಾರ್ಥಿಸಿದ್ದಾರೆ.

೧. **ಪಂಚನಾಡಿಯೊಳಿಪ್ಪ ಪಂಚ ಮೂರುತಿ ದೇವಾ:** ಸುಷುಮ್ನಾ, ವಜ್ರಿತಾ, ಆರ್ಯತಾ, ಪ್ರಕಾಶಿನಿ ಮತ್ತು ವೈಧೃತಿ ಎಂಬುದು ಪಂಚನಾಡಿಗಳು. ಈ ನಾಡಿಗಳಿಗೆ ಕ್ರಮವಾಗಿ ನಾರಾಯಣ, ಪ್ರದ್ಯುಮ್ನ, ಅನಿರುದ್ಧ, ವಾಸುದೇವ ಹಾಗೂ ಸಂಕರ್ಷಣ ಎಂಬ ಹರಿಯ ರೂಪಗಳ ಸನ್ನಿಧಾನ ಉಂಟು.

೨. **ರುಕುಮಾಂಗದ ತೃಪ್ತಿ ಬಡಿಸಿದ ನಿನಗೇನೊ:** ರುಕುಮಾಂಗದ ಒಬ್ಬ ರಾಜ; ಇವನು ತನ್ನ ಆಡಳಿತದಲ್ಲಿ ಏಕಾದಶಿಯ ವ್ರತವನ್ನು ಪ್ರತಿಯೊಬ್ಬರೂ ಕಡ್ಡಾಯವಾಗಿ ಆಚರಿಸುವಂತೆ ಮಾಡಿದ್ದನು.

೩. **ಪುಂಡರೀಕನು ನಿನಗೆ ಏರುವ ರಥವಿತ್ತನೆ:** ಪುಂಡರೀಕನು ತಾಯಿತಂದೆಯರ ಸೇವೆಯನ್ನು ಭಕ್ತಿ ನಿಷ್ಠೆಗಳಿಂದ ಹರಿಸೇವೆಯೆಂಬ ಅನುಸಂಧಾನದಿಂದ ಮಾಡಿ ಹರಿ ಪ್ರೀತಿಗೆ (ಪಾಂಡುರಂಗ ವಿಠಲನಿಗೆ) ಪಾತ್ರನಾದವನು.

೬೭

ತಿರುಪತಿಯ ಶ್ರೀನಿವಾಸನನ್ನು ಕುರಿತ ಭಕ್ತಿ ಭರಿತ ಸುಳಾದಿ ಇದು. ಮೊದಲರ್ಧ ಭಾಗದ ಸುಳಾದಿಯಲ್ಲಿ ಶ್ರೀನಿವಾಸನ ಅಲಂಕಾರದ ವರ್ಣನೆ ಇದ್ದು ಎರಡನೆಯ ಅರ್ಧ ಭಾಗದ ಸುಳಾದಿಯಲ್ಲಿ ಆರ್ತ ಪ್ರಾರ್ಥನೆಯನ್ನು ದಾಸರು ಸಲ್ಲಿಸಿದ್ದಾರೆ.

**೧. ಈಷಣತ್ರಯವೆಂಬೊ ಮಹಾಮಮತೆಯನ್ನು ಈ ಶರೀರದಲ್ಲಿ ಬಿಡಿಸು:** ದಾರೇಷಣ, ವಿತ್ತೇಷಣ ಹಾಗೂ ಪುತ್ರೇಷಣ ಎಂಬುದು ಈಷಣತ್ರಯಗಳಲ್ಲಿ ಪತ್ನಿ, ಪುತ್ರ ಹಾಗೂ ಸಂಪತ್ತಿನಲ್ಲಿ ಮಿತಿ ಮೀರಿದ ಮಮತೆಯನ್ನೇ ಈಷಣತ್ರಯ ಎನ್ನುತ್ತಾರೆ.

## ೬೮

ತಿರುಪತಿಯ ವೆಂಕಟೇಶನ ಚರಣವನ್ನು ಸ್ತುತಿಗೈದಿರುವ ಈ ಸುಳಾದಿಯನ್ನು 'ಚರಣ ಸ್ತೋತ್ರ' ಎನ್ನಬಹುದು. ತಿರುಮಲೆಯನ್ನು ದಾಸರು 'ಅಳಗಿರಿ' ಎಂದು ಕರೆದಿದ್ದಾರೆ. ಶ್ರೀನಿವಾಸನನ್ನು 'ಅಳಗಿರೀಶ' ಎಂದಿದ್ದಾರೆ.

**೧. ಕದನದಲಿ ನರನ ರಥ ಮುಂಚಿನಲ್ಲಿದ್ದ ಚರಣ:** ಕುರುಕ್ಷೇತ್ರದ ಯುದ್ಧದಲ್ಲಿ ಕೃಷ್ಣನು ಅರ್ಜುನನ ಸಾರಥಿಯಾಗಿದ್ದುದರ ಸೂಚನೆ ಇಲ್ಲಿದೆ.

**೨. ಗಗನ ಪಾತಾಳ ಭೂವ್ಯಾಪಿಸಿದ ಚರಣ:** ವಾಮನನಾಗಿ ಅವತರಿಸಿ ಬಲಿಯನ್ನು ದಾನ ಬೇಡಿ ತ್ರಿವಿಕ್ರಮನಾಗಿ ಬೆಳೆದು ಆಕಾಶ, ಪಾತಾಳ ಮತ್ತು ಭೂಮಿಯ ಕೊನೆಯವರೆಗೆ ಒಂದೊಂದು ಹೆಜ್ಜೆಯನ್ನಿಟ್ಟ ಕಥೆಯ ಸೂಚನೆ ಇಲ್ಲಿದೆ.

**೩. ಮೃಗ ಮದಾದಿಯಲ್ಲಿ ಪೂಜೆಗೊಂಬುವ ಚರಣ:** ತಿರುಪತಿಯ ಶ್ರೀನಿವಾಸನಿಗೆ ಪುನುಗು ಬೆಕ್ಕಿನ ಕಸ್ತೂರಿಯಿಂದ ವಿಶೇಷ ಪೂಜೆಯನ್ನು ನಡೆಸುವುದನ್ನು ಇಲ್ಲಿ ಸೂಚಿಸಲಾಗಿದೆ.

## ೬೯

ತೋತ ಎಂಬ ಬೇಟೆಗಾರನಿದ್ದ ಸ್ಥಳಕ್ಕೆ ರೋಮಹರ್ಷರೆಂಬ ಮುನಿಗಳು ಬಂದು ತಪಸ್ಸನ್ನಾಚರಿಸಲು ಅವಕಾಶವನ್ನು ಕೋರಿದರು. ತೋತನು ಅವರಿಗೆ ತಪಸ್ಸು ಮಾಡಲು ಸ್ಥಳವನ್ನು ಕೊಟ್ಟನು. ರೋಮಹರ್ಷರು ಶ್ರೀಹರಿಯನ್ನು ಕುರಿತು ತಪಸ್ಸು ಮಾಡಿ ಪ್ರತ್ಯಕ್ಷೀಕರಿಸಿಕೊಂಡರು. ಅನಂತರ ಭಗವನ್ಮೂರ್ತಿಯನ್ನು ಅಲ್ಲಿ ಪ್ರತಿಷ್ಠಾಪಿಸಿ ತೋತನ ಉಪಕಾರನ್ನು ನೆನೆದು ಭಗವನ್ಮೂರ್ತಿಗೆ 'ತೋತಾದ್ರೀಶ' ಎಂದು ಹೆಸರಿಟ್ಟರು. ದಾಸರು ಈ ಸುಳಾದಿಯಲ್ಲಿ ತೋತಾದ್ರೀಶನ ಅಲಂಕಾರವನ್ನು ಬಣ್ಣಿಸಿದ್ದಾರೆ. ವಿಜಯದಾಸರು ತೋತಾದ್ರಿಯನ್ನು ಕುರಿತು 'ನೋಡಿ ಧನ್ಯನಾದೆನೊ ತೋತಾದ್ರೀಶನ; ದೀನ ಬಂಧು ನಿನ್ನನ್ನೇ ನೆರೆ ನಂಬಿದೆ; ಅಚ್ಯುತಾನಂತ ಭಾರ್ಗವಿರಮಣ' ಎಂದು ಮೂರು ಕೃತಿಗಳನ್ನು ರಚಿಸಿರುವರು. ತೋತಾದ್ರಿಯಲ್ಲಿರುವ ನದಿಗೆ ರೋಮಹರ್ಷತೀರ್ಥ ಎನ್ನುತ್ತಾರೆ. ತೋತಾದ್ರಿಗೆ ಮಹೇಂದ್ರಾಚಲ ಎಂದು ಮತ್ತೊಂದು ಹೆಸರುಂಟು. ತೋತಾದ್ರಿಯಲ್ಲಿ ಭಗವಂತನಿಗೆ ಮಜ್ಜನ ಮಾಡಿದ ಎಣ್ಣೆಯನ್ನು ಒಂದು ಬಾವಿಯಲ್ಲಿ ಸಂಗ್ರಹಿಸಿಡುತ್ತಿದ್ದು ಇದರ ಲೇಪನದಿಂದ ಸಕಲ ವ್ಯಾಧಿಗಳೂ ನಿವಾರಣೆಯಾಗುವುದೆಂದು ಭಕ್ತರು ಭಾವಿಸುತ್ತಾರೆ. ತೋತಾದ್ರಿಯು ತಿರುನೆಲ್ವೆಲಿ ಮತ್ತು ನಾಗರಕೊಯಿಲ್ ಮಾರ್ಗದಲ್ಲಿರುವ ಒಂದು ಸ್ಥಳ.

## ೭೦

ಈ ಸುಳಾದಿಯೂ ತೋತಾದ್ರಿಯನ್ನು ಕುರಿತೇ ರಚನೆಯಾಗಿದೆ. ತೋತಾದ್ರಿಯ ಸ್ಥಳ ಪುರಾಣವನ್ನು ದಾಸರು ಇಲ್ಲಿ ಸಂಗ್ರಹಿಸಿದ್ದಾರೆ. ವಿವರಗಳಿಗೆ ೬೯ನೆಯ ಸುಳಾದಿಯ ಟಿಪ್ಪಣಿಯನ್ನು ನೋಡಿ.

## ೭೧

ದಕ್ಷಿಣ ಭಾರತದ ತುತ್ತ ತುದಿಯಲ್ಲಿರುವ ಹಲವು ತೀರ್ಥಕ್ಷೇತ್ರಗಳಲ್ಲಿ ದರ್ಭಶಯನ ಬಹು ಮುಖ್ಯ ಕ್ಷೇತ್ರವೆನಿಸಿದೆ. ಶ್ರೀರಾಮನು ಲಂಕೆಗೆ ಹೊರಡುವ ಮುನ್ನ ಈ ಸ್ಥಳದಲ್ಲಿ ದರ್ಭೆಯ ಮೇಲೆ ಮಲಗಿ "ಸಮುದ್ರ ರಾಜನಿಗೆ ದಾರಿಬಿಡು" ಎಂದು ಮುಷ್ಕರಗೈದ ಸ್ಥಳವಿದೆಂದು ಹೇಳುತ್ತಾರೆ. ಶ್ರೀರಾಮನು ದರ್ಭೆಯ ಮೇಲೆ ಮಲಗಿದ್ದ ನಿಮಿತ್ತ ಈ ಸ್ಥಳಕ್ಕೆ 'ದರ್ಭಶಯನ' ಎಂಬ ಹೆಸರುಂಟಾಯಿತು. ಇಲ್ಲಿರುವುದು ಶ್ರೀರಾಮನ ದೇವಾಲಯ. ಈ ದೇವಾಲಯದ ಬಳಿ ಇರುವ ಅಶ್ವತ್ಥ ವೃಕ್ಷವನ್ನು ಈಶ್ವರನು ನೆಟ್ಟನೆಂದು ಹೇಳುತ್ತಾರೆ.

## ೭೨

ನಿವರ್ತಿ ಸಂಗಮ ಎಂಬ ಕ್ಷೇತ್ರಕ್ಕೆ ಸಪ್ತಗಂಗೆ' ಎಂಬ ಹೆಸರುಂಟು. ಉತ್ತರ ಭಾರತದಲ್ಲಿರುವ ಈ ಕ್ಷೇತ್ರದಲ್ಲಿ ಸ್ನಾನ ಮುಖ್ಯವಾದುದು. ಕಾಶಿಯಲ್ಲಿದ್ದ ವಿಪ್ರನೊಬ್ಬನ ಪತ್ನಿಯು ಅನ್ಯನ ಸಂಪರ್ಕವನ್ನು ದಿನವೂ ಮಾಡುತ್ತ ತನ್ನ ಪಾಪವನ್ನು ನೀಗಿಕೊಳ್ಳಲು ಗಂಗೆಯ ಸ್ನಾನ ನಿತ್ಯ ಮಾಡುತ್ತಿದ್ದಳು. ಆಗ ಗಂಗೆ ಅವಳ ಪಾಪವನ್ನು ತೊಳೆದು ತಾನು ಪಾಪಿಷ್ಠೆಯೆನಿಸಿಕೊಳ್ಳುವುದಾಗಿ ಹೆದರಿ ಬಿಂದುಮಾಧವನನ್ನು ಪೂಜಿಸಿದಾಗ ಭಗವಂತನು "ನೀನು ಹೋಗಿ ನಿವರ್ತಿಸಂಗಮದಲ್ಲಿ ಸ್ನಾನ ಮಾಡು; ನಿನ್ನ ಪಾಪಗಳು ಹೋಗುತ್ತವೆ" ಎಂದನಂತೆ. ಗಂಗೆಯು ಕಾಗೆಯ ರೂಪದಿಂದ ನಿವರ್ತಿಸಂಗಮಕ್ಕೆ ಬಂದು ನಿತ್ಯ ಸ್ನಾನ ಮಾಡಿ ಹೋಗುತ್ತಿದ್ದುದನ್ನು ಮುನಿಯೊಬ್ಬ ಗುರುತಿಸಿ ಅವಳ ವಿಚಾರಗಳನ್ನು ತಿಳಿದು ಕೊಂಡು ನಿವರ್ತಿಸಂಗಮದ ಮಹಾತ್ಮೆಯನ್ನು ಅರಿತನಂತೆ. ಧರ್ಮರಾಜನ ಸೋದರರು ಯುದ್ಧ ನಿಮಿತ್ತದಿಂದ ಪಡೆದ ಪಾಪವನ್ನು ನಿವರ್ತಿಸಂಗಮದಲ್ಲಿ ಸ್ನಾನ ಮಾಡಿ ನೀಗಿಸಿಕೊಂಡನಂತೆ.

## ೭೩

ಪಂಢರಪುರದಲ್ಲಿ ಪಾಂಡುರಂಗ ವಿಠಲನು ಮನುಷ್ಯಾಕಾರದಿಂದ ವಿಜಯದಾಸರಿಗೆ ದರ್ಶನಕೊಟ್ಟಾಗ ಅವನನ್ನು ದೇವರೆಂದು ಗುರುತಿಸದೆ ಅವನು ಹೊರಟು ಹೋದ ಮೇಲೆ ಭಗವಂತನೇ ತನ್ನ ಬಳಿ ಬಂದಿದ್ದನೆಂಬುದನ್ನು ತಿಳಿದು ಪಶ್ಚಾತ್ತಾಪದಿಂದ ನೊಂದು ನುಡಿದಿರುವ ಸುಳಾದಿ ಇದು. ಪಂಢರಾಪುರವನ್ನು 'ಹಾಹಕ್ಷೇತ್ರ' ಎಂದು ಕರೆಯಲಾಗಿದೆ. ಇದು ದಾಸರ ಅಂತರಂಗ ಚರಿತೆಯ ರೇಖೆಗಳನ್ನು ಕಾಣಿಸಬಹುದಾದ ಸುಳಾದಿಯಾಗಿದೆ.

೭೪

ಒಂದು ಕಾಲಕ್ಕೆ ಕರ್ನಾಟಕದ ಭಾಗವೇ ಆಗಿದ್ದ ಪಂಢರಪುರ ಇಂದು ಮಹಾರಾಷ್ಟ್ರ ರಾಜ್ಯದಲ್ಲಿರುವುದು. ಇಲ್ಲಿ ಪುಂಡರೀಕ ಎಂಬ ಭಕ್ತನು ತಾಯಿತಂದೆಯರ ಸೇವೆಯನ್ನು ಶ್ರೀ ಹರಿಸೇವೆಯೆಂದು ಭಾವಿಸಿ ನಿಷ್ಠೆಯಿಂದ ಮಾಡುತ್ತಿದ್ದ ನಿಮಿತ್ತ ಹರಿಯು ವಿಠಲ ರೂಪಿಯಾಗಿ ಒಮ್ಮೆ ಪುಂಡರೀಕನಿಗೆ ಕಾಣಿಸಿಕೊಂಡನೆಂದೂ ಆಗ ಪುಂಡರೀಕನು ತನ್ನ ತಂದೆಗೆ ಸ್ನಾನ ಮಾಡಿಸುತ್ತಿದ್ದುದರಿಂದ ಒಂದು ಇಟ್ಟಿಗೆಯನ್ನು ಎಸೆದು ಅದರ ಮೇಲೆ ನಿಂತಿರಬೇಕೆಂದೂ ತಂದೆಗೆ ಸ್ನಾನಮಾಡಿಸಿ ಮುಗಿಸಿದ ಮೇಲೆ ವಿಠಲನ ಬಳಿ ಬರುವುದಾಗಿ ಹೇಳಿದನೆಂದೂ ಇದಕ್ಕೆ ಮೆಚ್ಚಿದ ವಿಠಲನು ಅಲ್ಲಿಯೇ ಕಲ್ಲಾಗಿ ನಿಂತನೆಂದೂ ಐತಿಹ್ಯವನ್ನು ಹೇಳುತ್ತಾರೆ. ಈ ಪಾಂಡುರಂಗ ವಿಠಲ ಮೂರ್ತಿಯ ಆಕಾರ ಕಿರಿದು.

೧. **ಸಾಂದೀಪಿನಿ ಪ್ರೀಂಯಾ:** ಸಾಂದೀಪಿನಿ ಎಂಬ ಬ್ರಾಹ್ಮಣನು ಅವಂತೀ ನಗರದಲ್ಲಿದ್ದನು. ಈ ಗುರುವಿನ ಬಳಿ ಕೃಷ್ಣ, ಬಲರಾಮ ಮತ್ತು ಸುಧಾಮರು ವಿದ್ಯಾಭ್ಯಾಸ ಮಾಡಿದರು. ಸಾಂದೀಪನ ಮಗನು ಮೃತನಾದಾಗ ಬದುಕಿಸಿ ಗುರುಗಳ ದುಃಖವನ್ನು ಕೃಷ್ಣ ಪರಿಹರಿಸಿದನು.

೨. **ಮನುಜನಾಗಿ ಧನುವನು ಮುರಿದು:** ಶ್ರೀ ಹರಿಯು ರಾಮನಾಗಿ ಹುಟ್ಟಿ ಶಿವಧನುಸ್ಸನ್ನು ಮುರಿದು ಜಾನಕಿಯನ್ನು ವಿವಾಹಗೊಂಡನು.

೩. **ದನುಜನ ಕಾಲಲಿ ಒರೆಸಿದೆ:** ರಾವಣ ಹಾಗೂ ಅವನ ಸಹಚರರನ್ನು ಸಂಪೂರ್ಣವಾಗಿ ನಾಶಗೊಳಿಸಿದವನು ರಾಮ.

೪. **ಮನುಜನಾಗಿ ಮಡಿಯನ್ನು ಉಟ್ಟು ತನುವಿಗೆ ಗಂಧವ ಪೂಸಿದ:** ಕೃಷ್ಣನು ಕಂಸನ ಆಹ್ವಾನವನ್ನು ಸ್ವೀಕರಿಸಿ ಬಿಲ್ಲಿನ ಯಾಗಕ್ಕೆ ಹೊರಟು ಮಧುರೆಯಲ್ಲಿ ಕಂಸನ ಅಗಸನನ್ನು ಕೊಂದು ಮಡಿ ಬಟ್ಟೆಯನ್ನು ಧರಿಸಿದನು. ಇದೇ ಸಂದರ್ಭದಲ್ಲಿ ಕುಬ್ಜೆಯು ಕೊಟ್ಟ ಗಂಧವನ್ನು ಸ್ವೀಕರಿಸಿ ಆಕೆಯ ಗೂನುತನವನ್ನು ಪರಿಹರಿಸಿದನು.

೫. **ಮನುಜನಾಗಿ ಹರನ ಸೋಲಿಸಿ ತನುಜ ತನುಜನ್ನ ಬಿಡಿಸಿದ:** ಶಿವಗಣದಲ್ಲಿ ಒಬ್ಬನ ಅವತಾರವಾಗಿದ್ದ ಬಾಣಾಸುರನು ಕೃಷ್ಣನ ಮೊಮ್ಮಗನಾದ ಅನಿರುದ್ಧನನ್ನು ಸೆರೆಯಲ್ಲಿಟ್ಟನು. ಆಗ ಕೃಷ್ಣನು ಬಾಣಾಸುರನನ್ನು ಸೋಲಿಸಿ ಅನಿರುದ್ಧನನ್ನು ಬಿಡಿಸಿ ಬಾಣಾಸುರನ ಮಗಳಾದ ಉಷೆಯೊಡನೆ ಅನಿರುದ್ಧನ ಮದುವೆಯನ್ನು ಮಾಡಿದನು.

ತನುಜ ಎಂದರೆ ಮಗ – ಇಲ್ಲಿ ಕೃಷ್ಣನ ಮಗ ಪ್ರದ್ಯುಮ್ನ.

ತನುಜ ತನುಜನ್ನ ಎಂದರೆ ಮೊಮ್ಮಗ – ಇಲ್ಲಿ ಕೃಷ್ಣನ ಮೊಮ್ಮಗ ಅನಿರುದ್ಧ.

## ೭೫

ಈ ಸುಳಾದಿಯು ಪಂಢರಾಪುರದ ಪಾಂಡುರಂಗನನ್ನು ಕುರಿತ ಸುಳಾದಿಯಾದರೂ ಭಗವಂತನು ಭಕ್ತರನ್ನು ಮೂಲರೂಪದಿಂದ ರಕ್ಷಿಸಿದ ಹಲವು ಪ್ರಸಂಗಗಳನ್ನು ಪ್ರಸ್ತಾವಿಸಿ ಆತ್ಮೋದ್ಧಾರಕ್ಕೆ ದಾಸರು ಪ್ರಾರ್ಥಿಸಿದ್ದಾರೆ. ಪಂಢರಾಪುರದ ವಿಠಲನು ತನ್ನ ಎರಡೂ ಕೈಗಳನ್ನು ಸೊಂಟದ ಮೇಲಿಟ್ಟುಕೊಂಡಿರುವುದನ್ನು ಗುರುತಿಸಿ ಯಾರು ವಿಠಲನ ಭಕ್ತರಾಗುವರೋ ಅವರಿಗೆ ಜನ್ಮಜನ್ಮಾಂತರಗಳೆಂಬ ಸಾಗರವು ಕೇವಲ ಸೊಂಟದ ಮಟ್ಟಕ್ಕೆ ಮಾತ್ರವಿದ್ದು ಸುಲಭವಾಗಿ ದಾಟಬಹುದೆಂದು ವಿಜಯದಾಸರು ಹೇಳಿದ್ದಾರೆ.

೧. **ಉರಿಮಾರಿತುತ್ತಿಗೆ ಜಡಭರತನ ಕಟ್ಟಿ:** ಜಡಭರತನು ಅಂಗೀರಸನ ಪುತ್ರನಾಗಿ ಹುಟ್ಟಿರುವಾಗ ವೃಷಲರಾಜನು ನಡೆಸುತ್ತಿದ್ದ ಕಾಳಿಕಾದೇವಿಯ ಪೂಜೆಗೆ ರಾಜಭಟರು ಇವನನ್ನು ಬಲಿಗೆಂದು ಹಿಡಿದು ತಂದರು. ಪೂರ್ವಜನ್ಮದ ತಪಸ್ಸಿನ ಫಲದಿಂದ ಕಾಳಿಕಾದೇವಿ ಇವನ ಬಲಿಗೆ ಅವಕಾಶ ಕೊಡದೆ ರಾಜನನ್ನು, ಭಟರನ್ನು ಸಂಹರಿಸಿ ಜಡಭರತನನ್ನು ಕಾಪಾಡಿದಳು.

## ೭೬

ಪಂಢರಾಪುರದ ವಿಠಲನನ್ನು ಪ್ರತಿಯೊಬ್ಬ ಭಕ್ತರೂ ಪಾದ ಮುಟ್ಟಿ ನಮಸ್ಕರಿಸುವ ಸಂಪ್ರದಾಯ ಇಂದಿಗೂ ಉಂಟು. ಆದ್ದರಿಂದ ದಾಸರು ವಿಠಲನ ಚರಣ ಸ್ತುತಿಗೈದಿದ್ದಾರೆ. ಪಾದ ಮಹಾತ್ಮೆಯನ್ನು ಬಣ್ಣಿಸುವ ಈ ಸುಳಾದಿಯಲ್ಲಿ ದಾಸರ ಭಕ್ತಿಭಾವವನ್ನು ಗ್ರಹಿಸಬಹುದಾಗಿದೆ.

೧. **ಕಂಸನ ಉದರದಲ್ಲಿ ನಾಟ್ಯವಾಡಿದ ಚರಣ:** ಕಂಸನ ನಾಶಕ್ಕಾಗಿಯೇ ಹುಟ್ಟಿದವನು ಶ್ರೀ ಕೃಷ್ಣ. ಕೃಷ್ಣನು ಕಂಸನ ಮೇಲೇರಿ ಆ ಜಟ್ಟಿಯನ್ನು ಮರ್ದಿಸಿ ಅವನ ಹೊಟ್ಟೆಯ ಮೇಲೆ ನೃತ್ಯಮಾಡಿದ ಕಥೆಯನ್ನು ದಾಸರು ಸೂಚಿಸಿದ್ದಾರೆ.

೨. **ಹಂಸಡಿಬಿಕರನಾ ಭೂತಳಕೆ ಒರೆಸಿದ ಚರಣ:** ಹಂಸ ಮತ್ತು ಡಿಬಿಕರು ರಾಕ್ಷಸರು. ಇವರನ್ನು ಕೃಷ್ಣ ಸಂಹರಿಸುತ್ತಾನೆ.

೩. **ಇಟ್ಟಿಗೆ ಗದ್ದಿಗೆ ಮೆಟ್ಟಿನಿಂದ ಚರಣ:** ಪುಂಡರೀಕನು ಎಸೆದ ಇಟ್ಟಿಗೆಯನ್ನೇ ಪೀಠವೆಂದು ಭಾವಿಸಿ ಪಾಂಡುರಂಗವಿಠಲನು ಅದರ ಮೇಲೆ ನಿಂತು ಭಕ್ತನು ತಾಯಿತಂದೆಯರ ಸೇವೆ ಮಾಡಿ ಬರುವ ತನಕ ಕಾದನು.

೪. **ಜಟ್ಟಿಗಳೆಲ್ಲರ ಕುಟ್ಟಿ ಕೆಡಹಿದ ಚರಣ:** ಕೃಷ್ಣನು ನೂರಾರು ಜಟ್ಟಿಗಳ ಜೊತೆ ಮಲ್ಲಯುದ್ಧಮಾಡಿ ಕಾಲಿನಿಂದ ಅವರೆದೆಯನ್ನು ಕುಟ್ಟಿ ಕೆಡಹಿದ ಸಂಗತಿಯನ್ನು ದಾಸರು ಉಲ್ಲೇಖಿಸಿದ್ದಾರೆ. ಕಂಸ, ಹಂಸ, ಡಿಬಿಕ, ಚಾಣೂರ, ಮುಷ್ಟಿಕ ಮೊದಲಾದವರು ಮುಖ್ಯ ಜಟ್ಟಿಗಳಾಗಿದ್ದರು.

೭೭

ವಿಜಯದಾಸರು ಪರಮಭಕ್ತಿಯಿಂದ ತಮ್ಮ ಮೇಲೆ ಕೃಪೆತೋರಬೇಕೆಂದು ಪಂಢರಾಪುರದ ಪಾಂಡುರಂಗ ವಿಠಲನನ್ನು ಅನನ್ಯವಾಗಿ ಪ್ರಾರ್ಥಿಸಿರುವುದನ್ನು ಈ ಸುಳಾದಿಯಲ್ಲಿ ಕಾಣುತ್ತೇವೆ.

೧. **ತ್ರಿವಿಧ ಜೀವರ ಭೇದ ಇಲ್ಲದಂತಾಗುವುದೊ:** ಜೀವರಾಶಿಯಲ್ಲಿ ಗುಣ ದೃಷ್ಟಿಯಿಂದ ಮೂರಾಗಿ ವಿಂಗಡಿಸುವುದುಂಟು. ಸಾತ್ವಿಕ, ರಾಜಸ, ತಾಮಸ ಎಂಬುದೇ ಆ ಮೂರು ವಿಭಾಗಗಳು. ಈ ಮೂರು ಬಗೆಯ ಜೀವರಾಶಿಗೂ ಪರಸ್ಪರ ಗುಣಗಳಲ್ಲಿ ವ್ಯತ್ಯಾಸವುಂಟು.

೭೮

ಪಂಢರಾಪುರದ ವಿಠಲನನ್ನು ಕುರಿತು ಬರೆದಿರುವ ಈ ಸುಳಾದಿಯಲ್ಲಿ ದಾಸರು ಅನನ್ಯ ಶರಣಾಗತರಾಗಿ ಪ್ರಾರ್ಥಿಸಿರುವುದನ್ನು ಗುರುತಿಸಬಹುದಾಗಿದೆ. ದಾಸರು ಬಡತನವನ್ನು ಪರಿಹರಿಸಬೇಕೆಂದು ಈ ಸುಳಾದಿಯಲ್ಲಿ ಕೇಳಿಕೊಂಡಿರುವುದರಿಂದ ಈ ಸುಳಾದಿಯ ರಚನೆಯ ಕಾಲಕ್ಕೆ ದಾಸರಿಗೆ ಐಶ್ವರ್ಯ ಪ್ರಾಪ್ತಿಯಾಗಿರಲಿಲ್ಲವೆಂದು ತಿಳಿಯಬಹುದಾಗಿದೆ. ಹೂಣ, ಪುಳಿಂದ, ಕಿರಾತರೇ ಮೊದಲಾದವರಿಗೆ ವಿಠಲನು ಕೃಪೆ ಮಾಡಿರುವನೆಂದು ದಾಸರು ಉಲ್ಲೇಖಿಸಿ ತಮ್ಮನ್ನೂ ಉದ್ಧರಿಸಬೇಕೆಂದು ಕೇಳಿಕೊಂಡಿದ್ದಾರೆ.

೭೯

ಈ ಸುಳಾದಿಯೂ ಪ್ರಾರ್ಥನಾ ರೂಪದ ಸುಳಾದಿಯಾಗಿದೆ. ವಿಠಲನ ವಿಶೇಷ ಗುಣ ಕಾರುಣ್ಯ ಶಕ್ತಿಗಳನ್ನು ದಾಸರು ಬಣ್ಣಿಸಿರುವುದರೊಡನೆ ವಿಠಲನು ನಮಗೆ ಸ್ವಪ್ನದಲ್ಲಿ ದರ್ಶನವಿತ್ತುದನ್ನು ನೆನೆದು ಧನ್ಯತಾ ಭಾವನೆಯನ್ನು ಪ್ರಕಟಿಸಿದ್ದಾರೆ.

೧. **ಹತ್ತೊಂದು ಇಂದ್ರಿಯಾ ಸುಖ ಬಿಡಿಸುವ ಜಾಣಾ:** ಯಾವ ಜೀವ ಮೋಕ್ಷವನ್ನು ಹೊಂದಬೇಕೋ ಆ ಜೀವ ಮಾನವನಾಗಿ ಹುಟ್ಟಿದಾಗ ಐದು ಕರ್ಮೇಂದ್ರಿಯ, ಐದು ಜ್ಞಾನೇಂದ್ರಿಯ ಹಾಗೂ ಮನಸ್ಸುಗಳು ಲೌಕಿಕವಾದ ಆಸೆ ಆಕಾಂಕ್ಷೆಗಳನ್ನು ಕಳೆದುಕೊಳ್ಳುವಂತೆ ಮಾಡಿ ಜ್ಞಾನ ಭಕ್ತಿ ವೈರಾಗ್ಯಗಳಿಂದ ಶೋಭಾಯಮಾನವಾಗುವಂತೆ ಭಗವಂತನು ಮಾಡುವನೆಂಬುದನ್ನು ದಾಸರು ಸೂಚಿಸಿದ್ದಾರೆ.

೮೦

ಪಂಢರಾಪುರದ ವಿಠಲನು ಕೇವಲ ಭಕ್ತಿಗೊಲಿಯುವವನು; ಕುಲಕ್ಕೆ ಬೆಲೆ ನೀಡುವವನಲ್ಲವೆಂದು ದಾಸರು ತಿಳಿಸಿ ಭಕ್ತಿಯನ್ನು ಕೊಟ್ಟು ಉದ್ಧರಿಸಬೇಕೆಂದು ವಿಠಲನಲ್ಲಿ

ಪ್ರಾರ್ಥಿಸಿದ್ದಾರೆ. ಮೈಲಾರಿ ಚೊಕ್ಕ ಎಂಬ ಹೀನಕುಲದವನ ಭಕ್ತಿಗೆ ವಿಠಲನು ಕೃಪೆ ತೋರಿದ ಸಂಗತಿಯನ್ನು ದಾಸರು ಉದಾಹರಿಸಿ ತಮ್ಮನ್ನು ಉದ್ಧರಿಸಬೇಕೆಂದು ಕೇಳಿಕೊಂಡಿದ್ದಾರೆ. ಪಂಢರಾಪುರವು ವೈಕುಂಠ, ಅನಂತಾಸನ, ಶ್ವೇತದ್ವೀಪ, ಗೋಕುಲ, ವೃಂದಾವನ, ದ್ವಾರಾವತಿ ನಗರಗಳಿಗೆ ಸಮಾನವೆಂದಿದ್ದಾರೆ.

೮೧

ಭಾರತದೇಶದಲ್ಲಿ ಅನೇಕ ಪುಣ್ಯನದಿಗಳ ಸಂಗಮ ಸ್ಥಾನಗಳಿದ್ದು ಅದರಲ್ಲಿ ಮಕುಟ ಮಣಿ ಎನಿಸಿಕೊಂಡಿರುವುದು ಪ್ರಯಾಗ. ಅಲಹಾಬಾದಿನ ಹೊರವಲಯದಲ್ಲಿರುವ ಗಂಗಾ, ಸರಸ್ವತಿ ಮತ್ತು ಯಮುನೆಯರ ಸಂಗಮ ಸ್ಥಳವೇ ಪ್ರಯಾಗ; ಇದನ್ನು ತ್ರಿವೇಣಿ ಎಂದೂ ಕರೆಯುವುದುಂಟು. ಬ್ರಹ್ಮ ವೈವರ್ತಕ ಪ್ರದೇಶವಿದು ಎನ್ನುತ್ತಾರೆ. ಭಗವಂತನ ತಲೆಯೇ ತ್ರಿವೇಣಿ, ನಾಭಿಯೇ ವಾರಣಾಸಿ, ಗಯವೇ ಪಾದ ಎನ್ನುವುದುಂಟು. ಇಲ್ಲಿ ಮಾಧವರಾಯನ ದೇವಾಲಯ ಉಂಟು. ಈ ಸಂಗಮದಲ್ಲಿ ಮಾಡುವ ಸ್ನಾನಕ್ಕೆ ಅತಿಶಯ ಮಹತ್ವ ಆಧ್ಯಾತ್ಮಿಕ ವಲಯದಲ್ಲುಂಟು. ತ್ರಿವೇಣಿ ಸಂಗಮದಲ್ಲಿ ಒಮ್ಮೆ ಅರ್ಥಾನು ಸಂಧಾನವಿಲ್ಲದೆ "ವಟವಟ' ಎಂದು ಯಾವುದೇ ಮಂತ್ರ ಹೇಳಿದರೂ ಅದು ಸಿದ್ಧಿಸಿ ಫಲ ಪ್ರದವಾಗುವುದೆಂದು ಹೇಳುತ್ತಾರೆ.

೮೨

ಶ್ರೀ ಕೃಷ್ಣನು ಅರ್ಜುನ ಮರದ ಕೆಳಭಾದಲ್ಲಿ ಮುನಿಗಳಿಗೆ ದರ್ಶನ ಕೊಟ್ಟ ನಿಮಿತ್ತ 'ಮಧ್ಯಾರ್ಜುನ' ಎಂಬ ಹೆಸರು ಈ ಕ್ಷೇತ್ರಕ್ಕುಂಟಾಯಿತು. ಮಧ್ಯಾರ್ಜುನದ ಯಾತ್ರೆಯಿಂದ ಎಲ್ಲ ಪಾಪಗಳೂ ನಾಶವಾಗುವುದೆಂದು ದಾಸರು ಹೇಳಿದ್ದಾರೆ. ಕಶ್ಯಪ ಮತ್ತು ವಿಭಾಂಡರೆಂಬ ಮಹರ್ಷಿಗಳು ಹೃಷಿಕೇಶವನ್ನು ಒಲಿಸಿಕೊಳ್ಳಲು ಹಸಿವು ಬಾಯಾರಿಕೆಗಳನ್ನು ತಡೆದು ಬಹುಕಾಲ ತಪಸ್ಸುಮಾಡಿ ಭಗವಂತನ ದರ್ಶನ ಪಡೆದರಂತೆ.

೮೩

ಮಧುರೆಯ ಬಳಿ ಇರುವ ಅಳಗಿರೀಶನನ್ನು ಕುರಿತ ಸುಳಾದಿ ಇದು. ದಾಸರು ಇಲ್ಲಿ ಅಳಗಿರೀಶನಿಗೆ ಮಾಡಿದ ಅಲಂಕಾರವನ್ನು ದೀರ್ಘವಾಗಿ ವರ್ಣಿಸಿದ್ದಾರೆ. ಅಳಗಿರೀಶನು ಚತುರ್ಭುಜಗಳಿಂದ ಶೋಭಿಸುತ್ತಿದ್ದು ಆಪಾದ ಮಸ್ತಕ ಪರ್ಯಂತ ನವರತ್ನ ಖಚಿತವಾದ ಆಭರಣಗಳಿಂದ ಶೋಭಿಸುತ್ತಿರುವನೆಂದು ದಾಸರು ಹೇಳಿದ್ದಾರೆ. ಅಳಗಿರಿಗೆ ವೃಷಭಾದ್ರಿ ಎಂಬ ಹೆಸರೂ ಉಂಟು. ಆದ್ದರಿಂದ ಅಳಗಿರೀಶನನ್ನು 'ವೃಷಭಾದ್ರಿ ನಿಲಯಾ' ಎಂದು ದಾಸರು ಕರೆದಿದ್ದಾರೆ. ಅಳಗಿರೀಶನನ್ನು ಮಂಡೂಕ ಋಷಿಯು ಒಲಿಸಿಕೊಂಡನಂತೆ. ಅರಣ್ಯದಲ್ಲಿರುವ ಅಳಗಿರೀಶನ ದೇವಾಲಯಕ್ಕೆ ಕಳ್ಳರು ತಮ್ಮ ಸಂಪಾದನೆಯಲ್ಲಿ ಅರ್ಧಭಾಗವನ್ನು ಅರ್ಪಿಸುವರೆಂದು ಹೇಳುತ್ತಾರೆ.!

೮೪

ಮಧುರೆಯ ಬಳಿ ಇರುವ ಅಳಗಿರೀಶನನ್ನು ಕುರಿತ ಮತ್ತೊಂದು ಸುಳಾದಿ ಇದು. ನಾರದರು ಈ ಕ್ಷೇತ್ರದ ಬಗ್ಗೆ ಹೊಗಳಿ ಇಲ್ಲಿ ಯಾಗವನ್ನು ಮಾಡಿದರೆಂದೂ, ಋಷಿ ಮಂಡೂಕ ಇಲ್ಲಿ ತಪಸ್ಸು ಮಾಡಿ ಸಿದ್ಧಿಪಡೆದನೆಂದೂ ದಾಸರು ಹೇಳಿದ್ದಾರೆ. ಈ ಕ್ಷೇತ್ರಮೂರ್ತಿಯ ದರ್ಶನದಿಂದುಂಟಾಗುವ ಪುಣ್ಯವು ಅಶ್ವತ್ಥದ ಬೀಜದಂತೆ ಅಂಕುರಿಸಿ ಹೆಮ್ಮರವಾಗಿ ಬೆಳೆಯುವುದೆಂದು ವಿಜಯದಾಸರು ಹೇಳಿದ್ದಾರೆ. ಈ ಕ್ಷೇತ್ರದ ವ್ಯಾಪ್ತಿ ಮೂರು ಯೋಜನವೆಂದಿದ್ದಾರೆ.

೮೫

ದಕ್ಷಿಣ ಭಾರತದ ತಮಿಳುನಾಡಿನ ಒಂದು ಪ್ರಸಿದ್ಧ ಕ್ಷೇತ್ರ ಮನ್ನಾರ್. ಇಲ್ಲಿ ಶ್ರೀ ಕೃಷ್ಣನ ದೇವಾಲಯವಿದೆ. ಆದ್ದರಿಂದ ದಾಸರು ಮನ್ನಾರ್‌ನ ಕೃಷ್ಣನನ್ನು ಸ್ತುತಿಸುತ್ತಾ ಕೃಷ್ಣಾವತಾರದ ಕಥೆಗಳನ್ನು ಜ್ಞಾಪಿಸಿದ್ದಾರೆ. ಮನ್ನಾರ್ ಎಂಬುದು ಒಬ್ಬ ದೈತ್ಯನ ಹೆಸರು. ಹರಿತಸ ಎಂಬ ಋಷಿಯು ತಪಸ್ಸಿಗೆ ಉತ್ತಮ ಸ್ಥಳವನ್ನು ಹುಡುಕುತ್ತಾ ಇಲ್ಲಿಗೆ ಬಂದು ಈ ಸ್ಥಳವನ್ನು ಉತ್ತಮವೆಂದು ಭಾವಿಸಿ ತಪಸ್ಸನ್ನಾರಂಭಿಸಿದನು. ಆಗ ಮನ್ನಾಸುರನೆಂಬುವವನು ಹರಿತಸನ ತಪಸ್ಸನ್ನು ಕೆಡಿಸಲು ಪ್ರಯತ್ನಿಸಿದಾಗ ಶ್ರೀ ಹರಿಯು ಮನ್ನಾಸುರನನ್ನು ಮರ್ದಿಸಿ ಹರಿತಸನನ್ನು ಕಾಪಾಡಿದನು. ಆದ್ದರಿಂದ ಈ ಸ್ಥಳಕ್ಕೆ ಮನ್ನಾರ್ ಎಂದು ಹೆಸರುಂಟಾಯಿತು. ಇಲ್ಲಿರುವ ಕ್ಷೇತ್ರಮೂರ್ತಿಯನ್ನು ರಾಜಗೋಪಾಲ ಎನ್ನುತ್ತಾರೆ.

೮೬

ಮಹಾನಂದಿ ಎಂಬ ಕ್ಷೇತ್ರದಲ್ಲಿ ಈಶ್ವರನ ದೇವಾಲಯವಿದೆ. ಇಲ್ಲಿ ಗಂಗೆಯೇ ಹರಿದು ಬಂದಳೆಂದು ಪ್ರತೀತಿ. ಶಿಲ ಎಂಬ ವಿಪ್ರನು ಇಲ್ಲಿ ತಪಸ್ಸುಮಾಡಿ ಪಡೆದ ಮಕ್ಕಳಿಗೆ ಪರ್ವತ ಹಾಗೂ ನಂದನ ಎಂಬ ಹೆಸರನ್ನಿಟ್ಟನು. ಉತ್ತರಭಾರತದಲ್ಲಿದ್ದ ಗಂಗಾನದಿಯು ತನ್ನ ಕ್ಷೇತ್ರಕ್ಕೆ ಹರಿದು ಬರಬೇಕೆಂದು ಪ್ರಾರ್ಥಿಸಿ ನಂದನನು ತಪಸ್ಸನ್ನಾಚರಿಸಿ ಸಫಲನಾದನು. ಆದ್ದರಿಂದ ಈ ಸ್ಥಳಕ್ಕೆ ಮಹಾನಂದಿ ಎಂಬ ಹೆಸರುಂಟಾಯಿತೆನ್ನುತ್ತಾರೆ.

೮೭

ಭಾರತೀಯರೆಲ್ಲರಿಗೂ ರಾಮೇಶ್ವರ ಪೂಜ್ಯವಾದ ತೀರ್ಥಕ್ಷೇತ್ರವಾಗಿದೆ. ದಕ್ಷಿಣದ ಸಮುದ್ರದ ತಡಿಯಲ್ಲಿರುವ ರಾಮೇಶ್ವರದಲ್ಲಿ ಶಿವಲಿಂಗ ದೇವಾಲಯವಿದೆ. ದಾಸರು ಈ ಸುಳಾದಿಯಲ್ಲಿ ರಾವಣನ ಹುಟ್ಟಿಗೆ ಕಾರಣವಾದ ಕಥೆಯನ್ನು ಕಪಿಸೈನ್ಯವನ್ನು ರಾಮ ಕಟ್ಟಿಕೊಂಡುದನ್ನು ಅಗಸ್ತ್ಯರು ಸಮುದ್ರದ ನೀರೆಲ್ಲವನ್ನು ಆಪೋಶನ ತೆಗೆದುಕೊಂಡ ಸಂದರ್ಭವನ್ನು ಸೂಚಿಸಿದ್ದಾರೆ. ರಾಮಾಯಣದ ಕಥೆಯೇ ಇಲ್ಲಿ ಸಂಗ್ರಹವಾಗಿದೆ.

**೧. ಅಂದು ಪೇಳಲು ಸನಂದನರು ಶಾಪಾ ತಂದು ಇತ್ತರು:** ಸನಕ, ಸನಂದ ಎಂಬ ಮುನಿಗಳು ವೈಕುಂಠದಲ್ಲಿದ್ದ ವಿಷ್ಣುವನ್ನು ನೋಡಲೆಂದು ಬಂದಾಗ ದ್ವಾರಪಾಲಕರಾಗಿದ್ದ ಜಯವಿಜಯರು ಅವರನ್ನು ತಡೆದ ನಿಮಿತ್ತ ಮೂರು ಬಾರಿ ಭೂಲೋಕದಲ್ಲಿ ಅವತರಿಸುವಂತಾಯಿತು. ಇವರು ಮೊದಲ ಜನ್ಮದಲ್ಲಿ ಹಿರಣ್ಯಾಕ್ಷ ಹಿರಣ್ಯ ಕಶ್ಯಪುಗಳಾದರು. ಎರಡನೆಯ ಜನ್ಮದಲ್ಲಿ ರಾವಣ ಕುಂಭಕರ್ಣರಾದರು; ಮೂರನೆಯ ಜನ್ಮದಲ್ಲಿ ಶಿಶುಪಾಲ ದಂತವಕ್ರರಾದರು.

**೨. ಇನಸುತನ ಕಾಯ್ದು:** ಸೂರ್ಯಪುತ್ರನೆಂದು ಹೇಳಲಾಗುವ ಸುಗ್ರೀವನನ್ನು ರಾಮ ರಕ್ಷಿಸಿದನು.

**೩. ಹಿಂದೆ ಬೊಮ್ಮನ ಸಿರ ಇಂದು ಶೇಖರನಿಗೆ ಬಂದು ಬಿಡದಿರಲು:** ತ್ರಿಮೂರ್ತಿಗಳಲ್ಲಿ ತಾನೇ ಶ್ರೇಷ್ಠನೆಂದು ಬ್ರಹ್ಮನು ಭಾವಿಸಿ ವೇದಗಳನ್ನು ನಿಂದಿಸಿದಾಗ ಶಿವನು ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸುವನು. ಆದರೆ ಆ ತಲೆಯು ಶಿವನನ್ನು ಹಿಡಿದುಕೊಂಡು ಬಿಟ್ಟಿತು. ಎಲ್ಲೇ ಹೋದರೂ, ಏನೇ ಮಾಡಿದರೂ ಬ್ರಹ್ಮನ ಕಪಾಲ ಅವನ ಕೈಯಿಂದ ದೂರವಾಗಲಿಲ್ಲ. ಕೊನೆಗೆ ರಾಮೇಶ್ವರದ ಸಮುದ್ರದಲ್ಲಿ ಸ್ನಾನ ಮಾಡಿದ ಮೇಲೆ ಬ್ರಹ್ಮ ಶಿರ ಕಳಚಿಕೊಂಡಿತಂತೆ.

## ೮೮

ರಾಮೇಶ್ವರವನ್ನು ಕುರಿತ ಸುಳಾದಿ ಇದು. ಮಧುರಿಯಲ್ಲಿ ಪುಣ್ಯನಿಧಿ ಎಂಬ ರಾಜನಿದ್ದನು. ಇವನಿಗೆ ಮಕ್ಕಳಿರಲಿಲ್ಲ. ಆಗ ಅವನ ಸುತ್ತಮುತ್ತಲಿದ್ದವರು ಸಮುದ್ರ ತೀರವಾದ ರಾಮೇಶ್ವರಕ್ಕೆ ಹೋಗಿ ಭಗವತ್ಸೇವೆಯನ್ನು ಮಾಡಲು ಸೂಚಿಸಿದರು. ಪುಣ್ಯನಿಧಿಯು ರಾಮೇಶ್ವರನ ಸೇವೆ ಮಾಡಿ ವಿಂಧ್ಯೆ ಎಂಬ ಮಗಳನ್ನು ಪಡೆದಳು. ಶ್ರೀಹರಿಯು ಒಮ್ಮೆ ವಿಂಧ್ಯೆಯನ್ನು ಪರೀಕ್ಷಿಸಲು ಕಪಟ ಭೂಸುರನ ವೇಷತಾಳಿ ಬಂದು ವಿಂಧ್ಯೆಯ ಕೈ ಹಿಡಿದನು. ಆಗ ವಿಂಧ್ಯೆಯ ಜೊತೆಯಲ್ಲಿದ್ದವರು ಕಪಟ ಭೂಸುರನನ್ನು ಹಿಡಿದು ಅವನ ಕಾಲುಗಳಿಗೆ ಸರಪಣಿ ತೊಡಿಸಿ ಬಂಧಿಸಿದರು. ಆಗ ಶ್ರೀ ಹರಿಯು ತನ್ನ ನಿಜರೂಪವನ್ನು ತೋರಿ ಪುಣ್ಯನಿಧಿಯನ್ನು ಆಶೀರ್ವದಿಸಿದನಂತೆ.

## ೮೯

ರಾಮೇಶ್ವರದ ಮಹಾತ್ಮೆಯನ್ನು ತಿಳಿಸುವ ಮತ್ತೊಂದು ಸುಳಾದಿ ಇದಾಗಿದೆ. ರಾಮೇಶ್ವರದಲ್ಲಿ ಶಿವಲಿಂಗ ದರ್ಶನ ಸಮುದ್ರ ಸಂಗಮದ ಸ್ನಾನ ಪರಮ ಪುಣ್ಯಕರವೆಂದು ದಾಸರು ಹೇಳಿದ್ದಾರೆ. ಎಲ್ಲ ಬಗೆಯ ಪಾಪಗಳೂ ನಾಶವಾಗಿ ಮನುಷ್ಯ ಪುಣ್ಯ ಪೂಜನಾಗಲು ರಾಮೇಶ್ವರದ ಯಾತ್ರೆ ಅತ್ಯತ್ಯವೆಂದು ದಾಸರು ಹೇಳಿದ್ದಾರೆ.

೯೦

ವಲ್ಕಲ ಎಂಬ ಕ್ಷೇತ್ರದಲ್ಲಿ ಜನಾರ್ಧನ ಸ್ವಾಮಿಯ ವಿಗ್ರಹವಿದೆ. ಇದನ್ನು 'ಶ್ರೀವಲ್ಕಲ' ಎಂದೂ ಕರೆಯುತ್ತಾರೆ. ಬ್ರಹ್ಮದೇವರು ಒಮ್ಮೆ ಸಭೆಯನ್ನು ನಡೆಸುತ್ತಿರುವಾಗ ಅವರ ಮಗನಾದ ನಾರದರು ಸಭೆಗೆ ಆಗಮಿಸಿದರು. ಅಂದು ನಾರದರಲ್ಲಿ ವಿಶೇಷವಾಗಿ ಶ್ರೀಹರಿಯ ವಿಭೂತಿ ಇದ್ದ ನಿಮಿತ್ತ ಬ್ರಹ್ಮದೇವರು ಆಸನದಿಂದೆದ್ದು ನಾರದರನ್ನು ಸ್ವಾಗತಿಸಿದನು. ಇದನ್ನು ಕಂಡ ಬ್ರಹ್ಮನ ಇತರ ಮಕ್ಕಳಾದ ನವಪ್ರಜೇಶ್ವರರು ಅಪಹಾಸ್ಯಮಾಡಿ ನಕ್ಕರು. ವಿಷಯ ತಿಳಿಯದೆ ಅಪಹಾಸ್ಯಮಾಡಿದ ನವಪ್ರಜೇಶ್ವರರಿಗೆ "ಭೂಲೋಕದಲ್ಲಿ ಹುಟ್ಟಿರಿ" ಎಂದು ಬ್ರಹ್ಮ ದೇವರು ಶಾಪವಿತ್ತರು. ಆಗ ಪಶ್ಚಾತ್ತಾಪ ಪಟ್ಟರೂ ಅವರು ಭೂಲೋಕದಲ್ಲಿ ಹುಟ್ಟಲೇಬೇಕಾಯಿತು. ಇವರು ಶ್ರೀ ವಲ್ಕಲದಲ್ಲಿ ಹುಟ್ಟಿ ಬ್ರಹ್ಮಯಜ್ಞಮಾಡಿ ಪುಣ್ಯ ಪೂಜರಾದರು. ಆದ್ದರಿಂದ ಈ ಕ್ಷೇತ್ರ ಪ್ರಸಿದ್ಧವಾಯಿತು.

೯೧

ದಕ್ಷಿಣಭಾರತದ ಸಮುದ್ರದ ತಡಿಯಲ್ಲಿರುವ ಕ್ಷೇತ್ರ ಶುಚೀಂದ್ರ. ಇಲ್ಲಿರುವ ಕ್ಷೇತ್ರಮೂರ್ತಿಯನ್ನು ಸುಧೇಂದ್ರಸ್ವಾಮಿ ಎನ್ನುತ್ತಾರೆ. ವಿಷ್ಣು ಕ್ಷೇತ್ರವಿದು. ಇಂದ್ರನು ಅಹಲ್ಯೆಯನ್ನು ಮೋಹಿಸಿದ ನಿಮಿತ್ತ ಪಡೆದ ಶಾಪವನ್ನು ನೀಗಿಕೊಳ್ಳಲು ಶುಚೀಂದ್ರಕ್ಕೆ ಬಂದು ದೇಹದಂಡನೆ ಮಾಡಿ ಒಂದೇ ಸಮನೆ ತಪಗೈದು ವಿಷ್ಣುವಿನ ಕೃಪೆಗೊಳಗಾಗಿ ಶಾಪಮುಕ್ತನಾಗಿ ಶುಚಿಯಾದ ನಿಮಿತ್ತ ಈ ಸ್ಥಳಕ್ಕೆ ಶುಚೀಂದ್ರ ಎಂದು ಹೆಸರಾಯಿತೆನ್ನುತ್ತಾರೆ. ಈ ಸುಳಾದಿಯಲ್ಲಿ ಇಂದ್ರನ ವಿಚಾರವನ್ನೇ ಪ್ರಧಾನವಾಗಿ ಹೇಳಿದ್ದಾರೆ.

೯೨

ಶ್ರೀಮುಷ್ಣವನ್ನು ಕುರಿತ ಸುಳಾದಿ ಇದು. ತಮಿಳುನಾಡಿನಲ್ಲಿರುವ ಈ ಕ್ಷೇತ್ರದಲ್ಲಿಯೇ ಭೂವರಾಹವತಾರವಾಗಿ ಹಿರಣ್ಯಾಕ್ಷನನ್ನು ಕೊಂದುದೆಂದು ದಾಸರಾಯರು ಹೇಳಿದ್ದಾರೆ. ಸುಶರ್ಮಾ ಎಂಬ ರೈತನ ಹೊಲದಲ್ಲಿ ಬೆಳೆದುದೆಲ್ಲವನ್ನು ನಾಶಮಾಡುತ್ತಿದ್ದ ಹಂದಿಯೊಂದನ್ನು ಸುಶರ್ಮ ಕೊಲ್ಲಲು ಯತ್ನಿಸಿದಾಗ ವರಾಹವೇ ಕಲ್ಲಾಗಿ ಮಹಿಮೆಯನ್ನು ತೋರಿತೆಂದು ಮತ್ತೊಂದು ಐತಿಹ್ಯವಿದೆ. ಇಲ್ಲಿರುವುದು ವರಾಹ ದೇವರು.

ಶ್ರೀಮುಷ್ಣವು ತಮಿಳುನಾಡಿನ ಚಿದಂಬರಂನಿಂದ ಸುಮಾರು ನಲವತ್ತು ಮೈಲಿ ದೂರದಲ್ಲಿದೆ.

೯೩

ಕಾವೇರಿ ತೀರದಲ್ಲಿರುವ ಶ್ರೀರಂಗ ದಕ್ಷಿಣ ಭಾರತದ ಅತ್ಯಂತ ಪ್ರಸಿದ್ಧವಾದ ವಿಷ್ಣು ಕ್ಷೇತ್ರ. ಇಲ್ಲಿ ರಂಗನಾಥನು ಮಲಗಿರುವ ಭಂಗಿಯಲ್ಲಿದ್ದಾನೆ. ಏಳು ಪ್ರಾಕಾರಗಳಿರುವ ಈ

ದೇವಾಲಯ ಬಲು ವಿಸ್ತಾರವಾದುದು. ಇಲ್ಲಿರುವ ಸರೋವರಕ್ಕೆ ಚಂದ್ರ ಪುಷ್ಕರಣಿ ಎನ್ನುತ್ತಾರೆ. ಶ್ರೀರಂಗನಾಥನ ಗುಣಗಾನವನ್ನು ವಿಜಯದಾಸರು ಮುಕ್ತಕಂಠದಿಂದ ಮಾಡಿದ್ದಾರೆ.

೯೪

ಶ್ರೀರಂಗವನ್ನು ಕುರಿತು ವಿಜಯದಾಸರು ರಚಿಸಿರುವ ಮತ್ತೊಂದು ಸುಳಾದಿ ಇದು. ವಿಭೀಷಣನು ರಾಮನ ಮೇಲಿನ ಭಕ್ತಿಯಿಂದ ತನಗೊಂದು ಪ್ರತಿಮೆಯನ್ನು ದಯಪಾಲಿಸಬೇಕೆಂದು ಕೇಳಿದಾಗ ರಾಮನು ರಂಗನಾಥನ ವಿಗ್ರಹವನ್ನು ವಿಭೀಷಣನಿಗೆ ಕೊಟ್ಟನಂತೆ. ಆ ವಿಗ್ರಹವನ್ನು ಎಲ್ಲಿಯೂ ಇಳಿಸದೆ ಲಂಕೆಗೊಯ್ಯಬೇಕೆಂದು ರಾಮ ಹೇಳಿದನು. ಆದರೆ ವಿಭೀಷಣನು ಶ್ರೀರಂಗದಲ್ಲಿ ಆ ಮೂರ್ತಿಯನ್ನು ಇಳಿಸುವಂತಾಯಿತು. ಅನಂತರ ಏನು ಮಾಡಿದರೂ ಆ ವಿಗ್ರಹವನ್ನು ಆ ಸ್ಥಳದಿಂದ ಕೀಳಲಾಗಲಿಲ್ಲ. ಅಂದಿನಿಂದ ರಂಗನಾಥನು ಭಕ್ತರಿಂದ ಪೂಜೆಯನ್ನು ಸ್ವೀಕರಿಸುತ್ತಿರುವನೆಂದು ದಾಸರು ಹೇಳಿದ್ದಾರೆ.

ಶ್ರೀರಂಗವು ಒಂದು ದ್ವೀಪ. ಕಾವೇರಿ ನದಿಯಿಂದ ಈ ನಗರ ಸುತ್ತುವರಿದಿದೆ. ಶ್ರೀರಂಗನಾಥನು ಬ್ರಹ್ಮನ ಪ್ರಾರ್ಥನೆಯಂತೆ ಪ್ರತ್ಯಕ್ಷನಾಗಿ ಕೆಲವು ವರ್ಷಗಳಾದ ತರುವಾಯ ಇಕ್ಷ್ವಾಕುರಾಜ ವಂಶದವರಿಗೆ ಈ ಪ್ರತಿಮೆಯು ಬ್ರಹ್ಮನಿಂದ ದಾನವಾಗಿ ಬಂದಿತೆಂಬ ಐತಿಹ್ಯವೂ ಉಂಟು.

೯೫

ಆಂಧ್ರಪ್ರದೇಶದ ಶ್ರೀಶೈಲ ಶಿವಭಕ್ತರಿಗೆ ಪರಮ ಪುಣ್ಯ ಕ್ಷೇತ್ರವೆನಿಸಿದೆ. ಇದು ವೈಷ್ಣವರಿಗೂ ಪವಿತ್ರವಾದ ಯಾತ್ರಾಸ್ಥಳವೇ ಆಗಿದೆ. ಇಲ್ಲಿ ಶಿವಲಿಂಗ ದೇವಾಲಯ ಉಂಟು. ಕ್ಷೇತ್ರಮೂರ್ತಿಯನ್ನು ಮಲ್ಲಿಕಾರ್ಜುನ ಎನ್ನುತ್ತಾರೆ. ಚಂದ್ರಗುಪ್ತನೆಂಬ ರಾಜನ ಅರಮನೆಯ ಗೋವು ಹಾಲೆಲ್ಲವನ್ನು ಈ ಶ್ರೀಶೈಲದ ಒಂದು ಭಾಗದಲ್ಲಿ ತಾನೇ ಸುರಿಸಿ ಅರಮನೆಗೆ ಹಿಂದಿರುಗುತ್ತಿದ್ದಿತಂತೆ. ರಾಜನು ಇದನ್ನು ಪರೀಕ್ಷಿಸಿ ದಂಡಿಸಿದನು. ಅವನಿಗೆ ಅಲ್ಲಿ ಶಿವಲಿಂಗವಿರುವುದು ತಿಳಿದಿರಲಿಲ್ಲ. ಮಲ್ಲಿಕಾ ಎಂಬ ತರುಣಿಯನ್ನು ಒಮ್ಮೆ ಈ ಸ್ಥಳದಲ್ಲಿ ಅವಳ ತಂದೆಯೇ ಮೋಹಿಸಿದಾಗ ಆಕೆ ತಂದೆಯನ್ನು ಶಪಿಸಿ ಶಿವನಲ್ಲಿ ಐಕ್ಯಗೊಂಡಳಂತೆ! ಆದ್ದರಿಂದಲೇ ಈ ಕ್ಷೇತ್ರಕ್ಕೆ ಮಲ್ಲಿಕಾರ್ಜುನ ಎಂಬ ಹೆಸರುಂಟಾಯಿತಂತೆ.

೯೬

ಶ್ವೇತನೆಂಬ ರಾಜನು ಭೂಲೋಕದಲ್ಲಿ ಅನ್ನದಾನವನ್ನು ಮಾಡದ ನಿಮಿತ್ತ ತನ್ನ ಮಾಂಸವನ್ನು ತಾನೇ ತಿನ್ನಬೇಕಾದ ಪರಿಸ್ಥಿತಿ ಉಂಟಾಯಿತಂತೆ. ಆಗ ನಾರದರು ಶ್ವೇತರಾಜನ ಬಳಿ ಬಂದು ಶ್ವೇತಶೃಂಗಿಯಲ್ಲಿ ತಪಸ್ಸುಮಾಡಿ ಪಾಪವನ್ನು ನೀಗಿಕೊಳ್ಳಬೇಕೆಂದು ಸೂಚಿಸಿದನು. ಶ್ವೇತನು ಅಲ್ಲಿ ಇಪ್ಪತ್ತು ಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿ ಮುಕ್ತನಾದನಂತೆ. ಶ್ವೇತನು ತಪಸ್ಸು ಮಾಡಿದ ಸ್ಥಳವಾದುದರಿಂದ ಆ ಸ್ಥಳಕ್ಕೆ ಶ್ವೇತಶೃಂಗಿ ಎಂಬ ಹೆಸರುಂಟಾಯಿತೆನ್ನುತ್ತಾರೆ.

ರಾಮಾಯಣದ ಕಾಲದಲ್ಲಿ ಶೃಂಗಿ ಎಂಬ ಮುನಿಯು ಇಲ್ಲಿ ವಾಸವಾಗಿದ್ದನಂತೆ. ಶ್ವೇತಶೃಂಗಿಯಲ್ಲಿ ತಪಸ್ಸು ಮಾಡಿ ಇಂದ್ರನು ತನ್ನ ಪಾಪವನ್ನು ಕಳೆದುಕೊಂಡನಂತೆ.

೯೭

ಮಂಗಳೂರಿನ ಪ್ರಾಂತ್ಯದಲ್ಲಿರುವ ಒಂದು ರಮಣೀಯ ಸ್ಥಳ ಸುಬ್ರಹ್ಮಣ್ಯ. ಇಲ್ಲಿರುವ ಜನರನ್ನು ತುಳುವರೆನ್ನಬಹುದು. ಏಕೆಂದರೆ ತುಳು ಭಾಷೆಯನ್ನು ಮಾತನಾಡುವ ಜನ ಇಲ್ಲುಂಟು. ಇಲ್ಲಿರುವ ಬೆಟ್ಟವನ್ನು ಸಿಂಹಗಿರಿ ಎನ್ನುತ್ತಾರೆ. ಸುಬ್ರಹ್ಮಣ್ಯದಲ್ಲಿ ಶಿವಲಿಂಗವಿದ್ದು ಇದನ್ನು ಮಾಧ್ವರು ಪೂಜಿಸುತ್ತಾರೆ.

ಗರುಡನು ತನ್ನ ತಾಯಿಯನ್ನು ಹಾವುಗಳ ಸೆರೆಯಿಂದ ಬಿಡಿಸಿ ಎಲ್ಲ ಹಾವುಗಳನ್ನು ಕೊಂದು ಹಾಕಿದನು. ವಾಸುಕಿ ಎಂಬ ಹಾವನ್ನು ಕಚ್ಚಿಕೊಂಡು ಗರುಡನು ಆಕಾಶದಲ್ಲಿ ಹಾರುತ್ತಿರುವಾಗ ಕಶ್ಯಪ ಮಹರ್ಷಿಯು ಗರುಡನಿಗೆ ಬುದ್ಧಿಯನ್ನು ಹೇಳಿ ವಾಸುಕಿಯನ್ನು ಬಿಡುಗಡೆ ಮಾಡಿಸಿದನು. ಅನಂತರ ಕಶ್ಯಪ ಮುನಿಯು ವಾಸುಕಿಯನ್ನು ಕರೆದು ಮೈದಡವಿ ಸಿಂಹಗಿರಿಯ ತಪ್ಪಲಿನಲ್ಲಿ ತಪಸ್ಸು ಮಾಡಿ ಗರುಡನಿಂದುಂಟಾಗಬಹುದಾದ ತೊಂದರೆಯನ್ನು ನೀಗಿಕೊಳ್ಳಬೇಕೆಂದು ಹೇಳಿದನಂತೆ. ವಾಸುಕಿಯು ಸಿಂಹಗಿರಿಯಲ್ಲಿ ಕೇವಲ ಗಾಳಿಯನ್ನು ಮಾತ್ರ ಸೇವಿಸಿ ಈಶ್ವರನನ್ನು ಕುರಿತು ತಪಸ್ಸುಮಾಡಿ ಪ್ರತ್ಯಕ್ಷಮಾಡಿಕೊಂಡನು. ಆಗ ಶಿವನು ತನ್ನ ಮಗನಾದ ಷಣ್ಮುಖ ಬರುವವರೆಗೆ ಅಲ್ಲಿಯೇ ಇರಬೇಕೆಂದು ವಾಸುಕಿಗೆ ತಿಳಿಸಿದನು. ಷಣ್ಮುಖನು ಸಿಂಹಗಿರಿಗೆ ಬಂದಾಗ ಅಶರೀರ ವಾಣಿಯು ಅಲ್ಲಿ ಲಕ್ಷ ಜನರಿಗೆ ಭೋಜನ ಮಾಡಿಸಿ ಎಂಜಲೆಲೆಯ ಮೇಲುರಳಬೇಕೆಂದು ನುಡಿಯಲು ಅದರಂತೆ ಷಣ್ಮುಖ ನಡೆದು ಪುಣ್ಯವಂತನಾಗಿ ನೆಲೆಸಿದನು. ಇಲ್ಲಿ ಕುಮಾರಧಾರಾ ಎಂಬ ನದಿ ಉಂಟು. ಇದರಲ್ಲಿ ಸ್ನಾನ ಮಾಡಿದರೆ ಕುಷ್ಠರೋಗವೂ ನಾಶವಾಗುವುದೆಂದು ಪ್ರತೀತಿಯುಂಟೆಂಬುದನ್ನು ದಾಸರು ಹೇಳಿದ್ದಾರೆ.

೯೮

ಕರ್ನಾಟಕವನ್ನು ರಾಜ್ಯಭಾರಮಾಡಿದ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆದ ಹಂಪೆ ತೀರ್ಥಕ್ಷೇತ್ರವೂ ಆಗಿದೆ. ಬಳ್ಳಾರಿ ಜಿಲ್ಲೆಯಲ್ಲಿರುವ ಇದು ಹೊಸಪೇಟೆಯ ಸಮೀಪದಲ್ಲಿದೆ. ವಿರೂಪಾಕ್ಷ (ಈಶ್ವರ) ಗುಲಗಂಜಿ ಮಾಧವ (ವಿಷ್ಣು), ಯಂತ್ರೋದ್ಧಾರಕ ಪ್ರಾಣದೇವರ ದೇವಾಲಯಗಳು ತುಂಬ ಮುಖ್ಯವಾದುವು. ಇದು ತುಂಗಾತೀರದಲ್ಲಿದೆ. ಕಾಶಿಗಿಂತ ಗುಲಗಂಜಿ ತೂಕದಷ್ಟು ಹೆಚ್ಚಿನ ಪುಣ್ಯಕ್ಷೇತ್ರ ಹಂಪೆ ಎಂದು ವಿಷ್ಣುವು ಲಕ್ಷ್ಮಿಗೆ ಹೇಳಿ ಗುಲಗಂಜಿ ಮಾಧವನಾಗಿ ಇಲ್ಲಿ ನಿಂತನಂತೆ. ಇದನ್ನು ತಿಳಿದ ಶಿವನು ಪಂಪಾ ಎಂಬ ಹೆಸರಿನಿಂದ ಕಿರಾತನಾಗಿ ಪಾರ್ವತಿಯೊಡನೆ ಬಂದು ಈ ಸ್ಥಳದ ವಿಶೇಷವನ್ನು ವಿವರಿಸಿ ವಿರೂಪಾಕ್ಷನಾಗಿ ನೆಲೆನಿಂತನೆಂದು ಐತಿಹ್ಯವಿದೆ. ಇದನ್ನು ದಕ್ಷಿಣದ ವಾರಣಾಸಿ ಎನ್ನುತ್ತಾರೆ.

## ೯೯

ಹಂಪೆಯಲ್ಲಿರುವ ಯಂತ್ರೋದ್ಧಾರಕ ಪ್ರಾಣದೇವರನ್ನು ಕುರಿತ ಸುಳಾದಿ ಇದು. ಪ್ರಾಣದೇವನೆನಿಸಿದ ಹನುಮಂತನನ್ನು ಯಂತ್ರದಲ್ಲಿ ಬಂಧಿಸಿರುವ ಭಂಗಿಯಲ್ಲಿರುವ ಮೂರ್ತಿ ಇಲ್ಲುಂಟು. ಇದನ್ನು ವ್ಯಾಸರಾಜರು ಕ್ರಿ.ಶ.ಹದಿನಾರನೆಯ ಶತಮಾನದಲ್ಲಿ ಪ್ರತಿಷ್ಠಾಪಿಸಿದರು. ಮೂರುಕೋಟಿ ಬೀಜ ಮಂತ್ರವನ್ನು ಜಪಿಸಿ ಈ ವಿಗ್ರಹವನ್ನು ವ್ಯಾಸರಾಜರು ಪ್ರತಿಷ್ಠಾಪಿಸಿದರೆಂದು ದಾಸರು ಹೇಳಿದ್ದಾರೆ.

## ೧೦೦

ಕರ್ನಾಟಕದ ಚಿತ್ರದುರ್ಗ ಜಿಲ್ಲೆಯಲ್ಲಿರುವ ಸ್ಥಳ ಹರಿಹರನನ್ನು ಕುರಿತ ಸುಳಾದಿ ಇದು. ಇದರ ಹೆಸರೇ ಹೇಳುವಂತೆ ಹರಿ ಮತ್ತು ಹರರಿಬ್ಬರೂ ಸೇರಿದ ವಿಗ್ರಹ ಇಲ್ಲಿದೆ. ಗುಹ ಎಂಬ ರಾಕ್ಷಸನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಮೆಚ್ಚಿಸಿಕೊಂಡು ಹರಿಯಿಂದಾಗಲೀ, ಹರನಿಂದಾಗಲೀ ಇತರ ದೇವತೆಗಳಿಂದಾಗಲೀ ತನಗೆ ಮರಣ ಬರದಂತೆ ಅನುಗ್ರಹಿಸಬೇಕೆಂದು ಕೇಳಿಕೊಂಡನು. ಅನಂತರ ಎಲ್ಲರನ್ನು ಪೀಡಿಸಲಾರಂಭಿಸಿದನು. ಆಗ ಹರಿಯು ಹರನೊಡನೆ ಕೂಡಿ ಹರಿಹರನಾಗಿ ಅವತರಿಸಿ ಗುಹಾಸುರನನ್ನು ಕೊಂದು ಹಾಕಿದನು. ಹರಿಹರನ ಗುಡಿಯ ಬಳಿಯಲ್ಲಿಯೇ ತುಂಗಾನದಿ ಹರಿಯುತ್ತದೆ.

## ೧೦೧

ಹರಿಹರನನ್ನು ಕುರಿತ ಮತ್ತೊಂದು ಸುಳಾದಿ ಇದು. ಹರಿ ಮತ್ತು ಹರರಿಬ್ಬರೂ ಸೇರಿರುವ ಈ ಮೂರ್ತಿಯಲ್ಲಿ ಯಾರ ಸನ್ನಿಧಾನ ವಿಶೇಷವೆಂಬ ಜಿಜ್ಞಾಸೆ ಮಾಡಿರುವ ಸುಳಾದಿ ಇದು. ಹರಿಯೇ ಸರ್ವೋತ್ತಮ; ಹರಿಹರ ವಿಗ್ರಹದಲ್ಲಿ ಹರಿಯ ಪ್ರಾಬಲ್ಯವೇ ಅಧಿಕವೆಂಬುದನ್ನು ವಿಜಯದಾಸರು ಇಲ್ಲಿ ದೃಷ್ಟಾಂತ ಪೂರ್ವಕ ತರ್ಕಿಸಿದ್ದಾರೆ.

# ಅನುಬಂಧ–೩

## ಸುಳಾದಿಗಳ ಅಕಾರಾದಿ

# ಅನುಬಂಧ–೪

## ಸುಳಾದಿಗಳ ಕ್ಷೇತ್ರಾನುಕ್ರಮಣಿಕೆ

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ.**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು

ಶ್ರೀ ವಿಜಯದಾಸರ ಸುಳಾದಿಗಳು